ಬೆಲೆ: ಎರಡು ಆಣೆ

# ಕರ್ಮವೀರ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

KARMAVEER
WEEKLY
HUBLI
*
OCT. 21
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] ◎ ಹುಬ್ಬಳ್ಳಿ ಸೋಮವಾರ ತಾರೀಖು ೨೧ — ೧೦ — ೧೯೪೬ ◎ [ ಸಂಚಿಕೆ ೩೭

# ಪ್ರಬಲ ರಾಷ್ಟ್ರ ಸೈನ್ಯಗಳು ಜಗತ್ತನ್ನೆ ಮುತ್ತಿವೆ

## ಪರಸ್ಪರ ಸಂಶಯದ ಫಲವಾಗಿ ಶಾಂತಿಯಲ್ಲಿ ಅವಿಶ್ವಾಸ: ರಶಿಯಾ ಬ್ರಿಟನ್‌ಗಳು ಭಾರಿ ಧೂರ್ತರು

[ ಹ್ಯಾನ್ಸನ್ ಬಾಲ್ಡ್ವಿನ್ನರಿಂದ ]

ಪ್ರತಿಯೊಂದು ರಾಷ್ಟ್ರವೂ ತನಗೆ ಯುದ್ಧ ಬೇಕಿಲ್ಲವೆಂದು ಅರಚುತ್ತ ಸಂಗಡಲೇ ಯುದ್ಧದ ಸಿದ್ಧತೆಯನ್ನು ನಡೆಸುತ್ತಿದೆ. ಜಗತ್ತು ನಿಜವಾಗಿ ಇಂದು ಶಾಂತಿ ಸ್ಥಿತಿಯಲ್ಲಿ ಕದಿ ಮುತ್ತಿಗೆಯ ಸ್ಥಿತಿಯಲ್ಲಿದೆಯೆನ್ನಬೇಕು. ಪ್ರಮುಖ ರಾಷ್ಟ್ರಗಳು ಪರಾಜಿತ ರಾಷ್ಟ್ರಗಳಲ್ಲಿಯೂ ಅಧೀನ ಭೂಭಾಗಗಳಲ್ಲಿಯೂ ಪ್ರಚಂಡ ಸೈನ್ಯಗಳನ್ನು ಇರಿಸಿವೆ ಒಂದರ ಹೆದರಿಕೆಯಿಂದ ಇನ್ನೊಂದು ಈ ಸೈನ್ಯಗಳನ್ನು ಹಿಂತೆಗೆಯಲು ಹಿಂದೆಮುಂದೆ ನೋಡುತ್ತಿದೆ. ಪರಸ್ಪರ ಆರೋಪಗಳಿಂದ ತಮ್ಮ ತಪ್ಪುಗಳನ್ನು ಮುಚ್ಚಿಕೊಳ್ಳಲು ನೋಡುತಿವೆ. ಬ್ರಿಟನ್ ಅಮೇರಿಕೆಗಳು ವಿದೇಶಗಳಲ್ಲಿಟ್ಟ ಸೈನ್ಯದ ಲೆಕ್ಕವನ್ನು ರಶಿಯಾ ಕೇಳುತಿದ್ದರೆ ಇರಾಣದಲ್ಲಿ ರಶಿಯಾದ ಉದ್ದೇಶಗಳನ್ನು ಕುರಿತು ಬೆವಿನ್ನರು ಸಂಶಯ ವ್ಯಕ್ತಗೊಳಿಸಿರುವರು. ಹೀಗಿರುವಾಗ ಎಲ್ಲಿಯ ಶಾಂತಿ ?

ಪ್ಯಾರೀಸಿನಲ್ಲಿಯೂ ಯುಕ್ತರಾಷ್ಟ್ರ ಸಂಘದಲ್ಲಿಯೂ ಪ್ರಬಲ ರಾಷ್ಟ್ರಗಳ ಸೈನ್ಯ ಪ್ರಸಾರದ ಪ್ರಶ್ನೆ ತೀವ್ರ ಚರ್ಚೆಯ ವಿಷಯವಾಯಿತು. ಆದರೆ ಅದೇ ಹೊತ್ತಿಗೆ ಪ್ರಬಲ ರಾಷ್ಟ್ರಗಳಾದ ರಶಿಯಾ, ಬ್ರಿಟನ್, ಅಮೇರಿಕಾ, ಫ್ರಾನ್ಸ ಇವುಗಳಿಗೆ ಸೇರಿದ ಕನಿಷ್ಠ ೩೧ ಲಕ್ಷ ಸೈನಿಕರು ಜಗತ್ತಿನ ವಿವಿಧ ಭಾಗಗಳಲ್ಲಿ ತಳವೂರಿವೆಂದು ಅಂದಾಜು ಮಾಡಲಾಗಿದೆ.

ಈಚೆಗೆ ಭದ್ರತಾಮಂಡಲದಲ್ಲಿ ರಶಿಯನ್ ಪ್ರತಿನಿಧಿಗಳು, ವಿದೇಶಗಳಲ್ಲಿ ಬೇರೆಹೊಡೆದಿರುವ ಬ್ರಿಟಿಶ ಮತ್ತು ಅಮೇರಿಕನ್ ಸೈನ್ಯಗಳ "ಲೆಕ್ಕಾಚಾರ" ವನ್ನು ಕೇಳಿದರು. ಅದಕ್ಕೆ ಪ್ರತಿಯಾಗಿ ರಶಿಯನ್ ಸೈನ್ಯ ಪ್ರಸಾರದ ಲೆಕ್ಕವನ್ನೂ ಪರ್ಯಾಯವಾಗಿ ಕೇಳುವ ಬೇಡಿಕೆಗಳು ಮುಂದೆ ಬಂದವು. ಇದರಿಂದ ಒಂದು ವಿಷಯವಂತೂ ಬಹಳ ನಿಚ್ಚಳವಾಯಿತು. ಶಾಂತಿ ಸಂಸ್ಥಾಪನೆಯ ಮೇಲೂ ಜಗತ್ತಿನ ಭವಿತವ್ಯದ ಮೇಲೂ ಈ ಸೈನ್ಯಪ್ರಸಾರದ ಪ್ರಶ್ನೆ ವಿಶೇಷ ಪರಿಣಾಮ ಮಾಡಲಿದೆ, ಎಂದು.

ಸೈನ್ಯ ಸನ್ನಾಹದ ಲೆಕ್ಕವನ್ನು ಸದ್ಯಕ್ಕಂತೂ ಅಂದಾಜು ಮಾಡಬೇಕು ಹೊರತು ಸರಿಯಾಗಿ ಲೆಕ್ಕ ಹಾಕುವದು ಸಾಧ್ಯವಿಲ್ಲ. ಯಾವ ರಾಷ್ಟ್ರವೂ ತನ್ನ ಸೈನ್ಯ ಚಲನವಲನಗಳ ಬಗ್ಗೆ ಯುದ್ಧಕಾಲದಲ್ಲಿ ವಹಿಸಿದ್ದ ಗೌಪ್ಯವನ್ನು ಇನ್ನೂ ಸಡಿಲಿಸಿಲ್ಲ. ಅದರಲ್ಲಿಯೂ ಮಾನಸಿಕ ಮತ್ತು ರಾಷ್ಟ್ರೀಯ ಯುದ್ಧವ್ಯಾಪಾರದಲ್ಲಿ ನಿರತವಾದ ರಶಿಯಾ, ಕೆಲವೇಳೆ ಕೆಲಕೆಲವು ಸ್ಥಳಗಳಲ್ಲಿರುವ ತನ್ನ ಸೈನ್ಯಬಲವನ್ನು ಬೇಕೆಂದೇ ಹೆಚ್ಚಿಸಿ ಅಥವಾ ಕಡಿಮೆ ಮಾಡಿ ಹೇಳುವ ಪರಿಪಾಠ ಇಟ್ಟುಕೊಂಡಿದೆ.

ಆದರೆ ಈ ಸೈನ್ಯ ಕೇಂದ್ರೀಕರಣಗಳಿಂದ ಬೇರೆ ಬೇರೆ ರಾಷ್ಟ್ರಗಳ ರಾಜಕೀಯ ಮತ್ತು ಆಕ್ರಮಣ ಧೋರಣೆಗಳ ಕುರುಹು ಹೊರಬೀಳುತ್ತದೆ. ಇನ್ನು ಕೆಲ ಸ್ಥಳಗಳಲ್ಲಿ ಸೈನ್ಯಬಲಗಳೇ ಆಯಾ ಪ್ರದೇಶಗಳ ರಾಜಕೀಯ ಭವಿತವ್ಯವನ್ನು ನಿರ್ಣಯಿಸುತ್ತಿವೆ ಇಲ್ಲವೆ ಅದರಲ್ಲಿ ಸಹಾಯ ನೀಡುತ್ತಿವೆ.

### ೧ ಸೋವಿಯಟ್ ಬಲಗಳು

ಇಂದು ಸೋವಿಯಟ್ ಬಲಗಳನ್ನು ಸೋವಿಯಟ್ ರಾಜ್ಯದ ಒಳಗೂ ಹೊರಗೂ ಸೇರಿ, ೪೫ ರಿಂದ ೫೩ ಲಕ್ಷವೆಂದು ಲೆಕ್ಕಿಸಬಹುದು. ೧೨೦ ರಿಂದ ೧೫೦ ಲಕ್ಷದಷ್ಟಿದ್ದ ಯುದ್ಧ ಕಾಲದ ಸೈನ್ಯಬಲದ ವಿಸರ್ಜನೆ ಈಗ ಪೂರ್ತಿಯಾಗಿದೆಯೆನ್ನಬಹುದು. ಈಗ ಇರುವಸೈನ್ಯಶಕ್ತಿಯನ್ನು ಇನ್ನು ಕಡಿಮೆ ಮಾಡುವ ಇಷ್ಟ ಸರಕಾರಕ್ಕೆ ಇಲ್ಲ.

ಈ ಬಲದಲ್ಲಿ ೩೫ ರಿಂದ ೪೦ ಲಕ್ಷ ಜನರು ಭೂಸೈನ್ಯದಲ್ಲಿದ್ದಾರೆ. ರಶಿಯನ್ ನೌಕಾಶಕ್ತಿ ಟನ್ ಲೆಕ್ಕದಲ್ಲಿ ಕ್ಷುಲ್ಲಕವಾಗಿದ್ದರೂ ಅದರಲ್ಲಿ ೩॥ ಲಕ್ಷ ಜನರಿರುವರೆಂದು ನಂಬಲಾಗಿದೆ. ಅವರಲ್ಲಿ ಅನೇಕರು ನೌಕಾ ಮತ್ತು ಸಮುದ್ರಯೋಧರೆಂದೂ ಕೆಲವರು ಜರ್ಮನರಿಂದ ಕಿತ್ತುಕೊಂಡ ೨೧ ಮಾದರಿಯ ಅನೇಕ ಜಲಾಂತರ್ಗಾಮಿಗಳ ಉಪಯೋಗದಲ್ಲಿ ಶಿಕ್ಷಣ ಪಡೆಯುತಿರುವರೆಂದೂ ಊಹೆ.

ರಶಿಯಾದ ವಿಮಾನಬಲವೂ ಅಸಾಮಾನ್ಯವಾಗಿದೆ. ಅದರಲ್ಲಿ ೬ ಲಕ್ಷ ಜನರಿರುವರೆಂದೂ ಎಲ್ಲ ಬಗೆಯವು ಸೇರಿ ೩೦,೦೦೦ ವಿಮಾನಗಳು ಅವರಲ್ಲಿವೆಂದೂ ಹೇಳಬಹುದು. ಆಕಾಶ ಪಡೆಯಲ್ಲಿ ೧೨ ರಿಂದ ೧೬ ಸಾವಿರ ಹೋರಾಟದ ವಿಮಾನಗಳಿದ್ದು ಅವುಗಳಲ್ಲಿ ಕೆಲವು ಬಹಳ ದೂರ ಹಾರಬಲ್ಲ ಬಿ-೨೯ ವಿಮಾನಗಳೂ ಇವೆ. ಆದರೆ ಯಾವುದೊಂದು ಸಮಯದಲ್ಲಿ ಈ ಬಲದಲ್ಲಿ ಕಾಲಾಂಶ ಅಥವಾ ಒಂದುಮೂರಾಂಶಕ್ಕಿಂತ ಹೆಚ್ಚು ವಿಮಾನಗಳನ್ನು ರಶಿಯನ್ನರು ಉಪಯೋಗಿಸಲಾರರೆಂದು ತೋರುತ್ತದೆ.

ಇದಲ್ಲದೆ ಭದ್ರತಾ ಪೋಲಿಸು ಕಡಿಮೆಯೆಂದರೆ ೫ ಲಕ್ಷ ಇರಬೇಕು.

### ಆಗ್ನೇಯ ಯುರೋಪಿನಲ್ಲಿ

ನೌಕಾಪಡೆಯನ್ನು ಬಿಟ್ಟು ೧೫ ಲಕ್ಷಕ್ಕೂ ಮಿಕ್ಕಿದಷ್ಟು ಸೋವಿಯಟ್ ಬಲಗಳು ರಶಿಯಾದ ಹೊರಗಿವೆ. ಇದಲ್ಲದೆ ಭದ್ರತಾ ಪೋಲೀಸು ಎಷ್ಟಿದೆಯೋ ಗೊತ್ತಿಲ್ಲ. ಆದರೆ ಕಳೆದ ವರ್ಷದಲ್ಲಿ ರಶಿಯನ್ ಆಕ್ರಮಕ ಬಲಗಳ ಸಂಖ್ಯೆ ಬಹಳ ಕಡಿಮೆಯಾಗಿದೆ. ಈ ಕಡಿತ ಜರ್ಮನಿಯಲ್ಲಿ ಅಷ್ಟು ಸ್ಪಷ್ಟವಾಗಿ ಗೋಚರವಾಗಿಲ್ಲವಾದರೂ ಆಗ್ನೇಯ ಯುರೋಪಿನಲ್ಲಿಯೂ ಕೆಲ ಮಟ್ಟಿಗೆ ಮಂಚೂರಿಯಾದಲ್ಲಿಯೂ ಕಣ್ಣಿಗೆ ನಾಟುವಂತಿದೆ.

ಆಸ್ಟ್ರಿಯಾದ ದುರ್ಬಲ ಸಮೃದ್ಧಿಯ ಮೇಲೆ ಇನ್ನೂ ಭಾರ ಹೊರಿಸುವದು ಸಾಧ್ಯವಿಲ್ಲದರಿಂದಲೋ ಏನೋ ಆಸ್ಟ್ರಿಯಾ ಹಂಗೇರಿಗಳಲ್ಲಿದ್ದ ರಶಿಯನ್ ಸೈನ್ಯವನ್ನು ಕಡಿಮೆ ಮಾಡಲಾಗಿದೆ. ಆದರೂ ಆಸ್ಟ್ರಿಯಾದಲ್ಲಿರುವ ರಶಿಯನ್ ಸೈನ್ಯಗಳು ಆ ದೇಶದಲ್ಲಿರುವ ಅಂಗ್ಲೋ—ಅಮೇರಿಕನ್—ಫ್ರೆಂಚ ಬಲಗಳ ಮೊತ್ತಕ್ಕಿಂತ ಹೆಚ್ಚಾಗಿವೆ. ಸಾಲದ್ದಕ್ಕೆ ಬಾಲ್ಕನ್ ರಾಷ್ಟ್ರಗಳಲ್ಲಿರುವ ರಶಿಯನ್ ಬಲಗಳು ಬೇಕಾದಾಗ ಬೆಂಬಲಕ್ಕೆ ಬರಬಲ್ಲವು. ರುಮೇನಿಯಾದಲ್ಲಿರುವ ಆಕ್ರಮಕ ಸೈನ್ಯವನ್ನೂ ಸ್ವಲ್ಪ ಕಡಿಮೆ ಮಾಡಲಾಗಿದೆ. ಆದರೆ ಅಲ್ಲಿ ತಳವೂರಿರುವ ರಶಿಯಾದ ಬಾಲ್ಕನ್ ಕಾದಿಟ್ಟ ಬಲಗಳೇ ಜರ್ಮನಿಯಲ್ಲಿರುವ ಅಮೇರಿಕನ್ ಬಲಗಳಿಗಿಂತ ಅಧಿಕವಾಗಿವೆ.

### ಜರ್ಮನಿ ಪೋಲಂಡ್‌ಗಳಲ್ಲಿ

ಅದರೂ ಅದರ ಸೈನ್ಯ ಪ್ರಸಾರದ ಮೇಲಿಂದ ಹೇಳಬೇಕಾದರೆ, ರಶಿಯಾಕ್ಕಿರುವ ಆಸ್ಥೆ ಜರ್ಮನಿ ಪೋಲಂಡಗಳಲ್ಲೆ ಹೆಚ್ಚೆನ್ನಬೇಕು. ರಾಜಕೀಯ ಮತ್ತು ಮಿಲಿಟರಿ ದೃಷ್ಟಿಗಳೆರಡರಲ್ಲೂ ಜರ್ಮನಿಯೇ ಯುರೋಪದ ಕೀಲಿಕೈಯೆಂದು ರಶಿಯಾಕ್ಕೆ ಗೊತ್ತು. ಅದಕ್ಕಾಗಿ ಅದು ಜರ್ಮನಿಯ ತನ್ನ ಆಕ್ರಮಣದ ಭಾಗದಲ್ಲಿ ೭ ಲಕ್ಷ ಸೈನ್ಯವನ್ನು ಕೂಡಿಟ್ಟಿರುವದಲ್ಲದೆ ಅದರ ಬೆಂಬಲಕ್ಕೆ ಪೋಲಂಡಿನಲ್ಲಿ ೪। ಲಕ್ಷ ಬಲವನ್ನಿರಿಸಿದೆ. ಈ ಸೈನ್ಯಗಳಿಗೆ ರಶಿಯಾದ ವಿಮಾನ ಬಲದಲ್ಲಿ ನೂರಕ್ಕೆ ೨೫ ರಷ್ಟರ ಬೆಂಬಲವಿದೆ. ಬೇರೆಡೆಗಳಲ್ಲಿ ಹೇಗೋ ಹಾಗೆಯೆ ಜರ್ಮನಿಯಲ್ಲಿಯೂ ಪಾಶ್ಚಿಮಾತ್ಯ ಬಲಗಳನ್ನು ಮೀರಿಸುವಷ್ಟು ಸೈನ್ಯವನ್ನು ಕೂಡಿಡುವದೇ ರಶಿಯಾದ ಧೋರಣೆ.

ಪೂರ್ವದಲ್ಲಿ ಬೈಕಲ ಸರೋವರದಿಂದಾಚೆಗೆ ೭॥ ಲಕ್ಷ ಸೈನ್ಯವನ್ನಾದರೂ ರಶಿಯನ್ನರು ಇಟ್ಟಿರಬೇಕು. ಇದರಲ್ಲಿ ಒಂದೆರಡು ದಲಗಳು ಕಮಚಟಕಾದಲ್ಲಿಯೂ ( ಅಲ್ಲಿ ಪೆಟ್ರೋಪೌಲೋಸ್ಕ ಬಂದರವನ್ನು ಮಹತ್ವದ ಠಾಣೆಯಾಗಿ ಮಾರ್ಪಡಿಸಲಾಗುತಿದೆ. ) ಕ್ಯುರಾಯಿಲ ಮತ್ತು ಕೊಮುಂಡರಸ್ಕಿ ದ್ವೀಪಗಳಲ್ಲಿ ಕೆಲ ಪಡೆಗಳೂ ಇವೆ. ಆರ್ಥರ್ ಬಂದರವನ್ನೂ ಡಾಯರನ್ ಬಂದರವನ್ನೂ ಬಲಿಷ್ಠ ಬಲಗಳು ರಕ್ಷಿಸುತಿವೆ. ಮಂಚೂರಿಯನ್ ರೇಲ ರಸ್ತೆಯಲ್ಲಿಯೂ ರಶಿಯನ್ ಬಲಗಳಿವೆ. ಕೋರಿಯಾದಲ್ಲಿರುವ ಅವರ ಬಲ ಅಮೇರಿಕೆಯ ಬಲಕ್ಕಿಂತ ಮುಮ್ಮಡಿಯುಂಟು.

ಸಾಲದ್ದಕ್ಕೆ ಯುಗೋಸ್ಲಾವಿಯಾ, ಝೆಕೊಸ್ಲೋವಾಕಿಯಾ, ಪೋಲಂಡ್, ಬಾಲ್ಕನ್ ರಾಷ್ಟ್ರಗಳು ಮತ್ತು ಅಲ್ಬೇನಿಯಾದಲ್ಲಿ ಕೂಡ ರಶಿಯನ್ನರು ಕೈಗೊಂಬೆ ರಾಜ್ಯಗಳ ಸೈನ್ಯಗಳನ್ನು ತರಬೇತು ಗೊಳಿಸುತಿದ್ದಾರೆ. ಈ ದೇಶಗಳು ದಿನದಿನವೂ ಹೆಚ್ಚು ಹೆಚ್ಚು ಮಾಸ್ಕೋದ ಅಧೀನವಾಗತೊಡಗಿವೆ. ಅಝುರಬೈಜಾನದಲ್ಲಿ ನಾಗರಿಕ ಇಲ್ಲವೆ ಇರಾಣಿ ಮಿಲಿಟರಿ ಉಡುಪಿನಲ್ಲಿ ೧೦೦೦೦ ರಶಿಯನ್ ಸೈನಿಕರು ಅಝುರಬೈಜಾನದ ಸೈನ್ಯವನ್ನು ಸನ್ನದ್ಧ ಗೊಳಿಸುತಿದ್ದಾರೆ.

ಸ್ಟಾಲಿನ್‌ಗ್ರಾಡಿನಲ್ಲಿ ಸೆರೆ ಸಿಕ್ಕಿದ ಜರ್ಮನ್ ಫೀಲ್ಡ ಮಾರ್ಶಲ್ ಪಾಲಸನ ನೇತೃತ್ವದಲ್ಲಿ ಜರ್ಮನ್ ಯುದ್ಧ ಕೈದಿಗಳ ಒಂದು "ಸ್ವತಂತ್ರ ಜರ್ಮನ್ ಪಡೆ" ಯನ್ನು ರಶಿಯನ್ನರು ತಯಾರಿಸುತಿರುವರೆಂದು ಬಲವಾದ ಆದರೂ ಪೂರ್ಣ ಸಿದ್ಧವಾಗದ ವರದಿಗಳಿವೆ.

ಜಾಗತಿಕ ದೃಷ್ಟಿಯಿಂದ ನೋಡಿದರೆ ರಶಿಯನ್ ಸೈನ್ಯ ಪ್ರಸಾರದ ಹಿಂದೆ ಪೂರ್ವ ಯುರೋಪ ಮತ್ತು ಈಶಾನ್ಯ ಏಶಿಯಾದಲ್ಲಿ ಸೋವಿಯಟ್ ರಾಜಕೀಯ ಆರ್ಥಿಕ ಸೈನಿಕ ಪ್ರಭಾವವನ್ನು ಪ್ರತಿಷ್ಠಿಸುವ ಉದ್ದೇಶವಿರುವದು ವ್ಯಕ್ತವಾಗುತಿದೆ. ಈ ದೃಷ್ಟಿಯಿಂದ ಜರ್ಮನಿಗೆ ಎಲ್ಲಕ್ಕಿಂತ ಮಹತ್ವ ಕೊಡಲಾಗಿದ್ದರೂ ಆಗ್ನೇಯ ಯುರೋಪ ಮತ್ತು ಮಧ್ಯಪೂರ್ವ ಭಾಗದಲ್ಲಿ ರಶಿಯನ್ ನೇತೃತ್ವದಲ್ಲಿ ಸೋವಿಯಟ್ ಕೈಗೊಂಬೆ ಸೈನ್ಯಗಳೂ ಕಮ್ಯೂನಿಸ್ಟ ಪ್ರಾಬಲ್ಯದ ಸೈನ್ಯಗಳೂ ಗ್ರೀಸ್, ಇರಾಣದಂಥ ದೇಶಗಳಲ್ಲಿ ಚಂಚುಪ್ರವೇಶ ಮಾಡಲು ಉಪಯೋಗಿಸಲ್ಪಡುತಿವೆ.

ಈ ಪ್ರಕಾರ ರಶಿಯನ್ನರು ತಮ್ಮ ಸ್ಥಳಗಳಲ್ಲಿ ಮಿಲಿಟರಿ ಗೋಡೆಗಳನ್ನು ಕಟ್ಟುತಿದ್ದರೂ ಅವರು ಎಲ್ಲಿಯೂ ದೊಡ್ಡ ದಾಳಿಗಾಗಿ ಸನ್ನಾಹ ನಡೆಸುತಿರುವಂತೆ ತೋರುವದಿಲ್ಲ.

### ೨ ಬ್ರಿಟಿಶ ಬಲಗಳು

ಬ್ರಿಟಿಶ ಸೈನ್ಯಗಳಂತೂ ಜಗತ್ತಿನಲ್ಲೆಲ್ಲ ಹಬ್ಬಿವೆ. ಸಾಮ್ರಾಜ್ಯವನ್ನು ಬಿಟ್ಟು ಬರಿ ಬ್ರಿಟನ್ನೊಂದೇ ಮೂರೂ ಬಲಗಳು ಸೇರಿ ಇಟ್ಟುಕೊಂಡಿರುವ ಸೈನ್ಯದ ಸಂಖ್ಯೆಯನ್ನು ಈ ವರ್ಷಾಂತ್ಯದೊಳಗೆ ೧೨ ಲಕ್ಷಕ್ಕೆ ಇಳಿಸಲಾಗುವದು. ಇದರಲ್ಲಿ ಹೆಚ್ಚಿನ ಅಂಶ ಬ್ರಿಟನ್ನಿನ ಹೊರಗೇ ಇದೆ. ರಶಿಯಾದಂತೆ ಇಂಗ್ಲಂಡಾದರೂ ಜರ್ಮನಿಯಲ್ಲಿಯೇ ಎಲ್ಲಕ್ಕೂ ಹೆಚ್ಚು ಸೈನ್ಯವನ್ನಿಟ್ಟಿದೆ. ಮಾತ್ರವಲ್ಲ, ಅಮೇರಿಕೆಯಂತೆ ಜರ್ಮನಿಯಲ್ಲಾಗಲಿ ಯುರೋಪಿನ ಇತರ ಕ್ಷೇತ್ರಗಳಲ್ಲಾಗಲಿ ತನ್ನ ಸೈನ್ಯಸಂಖ್ಯೆಯನ್ನು ಕಡಿಮೆ ಮಾಡಿಲ್ಲ. ಎರಡು ದಲಗಳಷ್ಟು ಬ್ರಿಟಿಶ ಸೇನೆಯನ್ನು ಒಂದು ಸುಸಂಘಟಿತವಾದ ದೊಡ್ಡ ದಲದಲ್ಲಿ ಸೇರಿಸಿ ಟ್ರೀಸ್ಟೆಯ ಬಳಿ, ಅಮೇರಿಕೆಯ ಎಂಭತ್ತೆಂಟನೆ ದಲದ ಸಂಗಡ,

—೬ ನೇ ಪುಟಕ್ಕೆ

---

**ಬಿಡುವು**

**ದೀಪಾವಳಿ ಹಬ್ಬದ ನಿಮಿತ್ತ ತಾ. ೨೮—೧೦—೧೯೪೬ ನೇ ತಾರೀಕಿನ ಸಂಚಿಕೆ ಹೊರಡುವದಿಲ್ಲ.**

ವ್ಯವಸ್ಥಾಪಕ ಕರ್ಮವೀರ

# ವಿಜ್ಞಾನದ ಮುನ್ನಡೆ

ಸಂಗ್ರಾಹಕ :— ಟಿ. ಕೆ. ನಾಯಕ. ಬಿ. ಎಸ್‌ಸಿ. ಧಾರವಾಡ

## ನಿಮಗೆ ನಿಜವಾಗಿಯೂ ಹೆಚ್ಚು ಸಕ್ಕರೆ ಬೇಕೆ?

ಸಕ್ಕರೆಯು ಚಟದ ಆಹಾರವಾಗಿದೆ. ಕೆಲವರಂತೂ ತಾವು ತಿನ್ನುವ ಪ್ರತಿಯೊಂದು ಪದಾರ್ಥಕ್ಕೂ ಸಕ್ಕರೆಯನ್ನು ಬೇಡುತ್ತಾರೆ. ಆದರೆ ಈ ತರದ ಆಹಾರದಿಂದ ಇಡೀ ಮಾನವ ಸಮಾಜಕ್ಕೆ ಒಂದು ದೊಡ್ಡ ಆಘಾತವೆಂದು ಔಷಧ ಹಾಗೂ ಪಚನಕ್ರಿಯೆಯ ತಜ್ಞರು ಅಭಿಪ್ರಾಯ ಪಡುತ್ತಾರೆ. ಪಚನೇಂದ್ರಿಯಗಳಿಂದ ಸಕ್ಕರೆಯು ಅತಿ ತೀವ್ರವಾಗಿ ಹೀರಿಕೊಳ್ಳಲ್ಪಡುವದರಲ್ಲಿ ಅವ ಶಂಕೆಯಿಲ್ಲ. ಆದರೆ ಇದರಲ್ಲಿ ಅನ್ನದ ಸತ್ವವಿಲ್ಲ. ಆಧುನಿಕ ಸುಧಾರಕ ಸಮಾಜವು ಹೆಚ್ಚು ಸಕ್ಕರೆಯ ಕುಲದ ಆಹಾರವನ್ನು ಹೆಚ್ಚಾಗಿ ತಿನ್ನುವದರ ಲಕ್ಕೆ ಒಂದು ಒಡೆದು ತೋರುವ ಸಂಗತಿಯುಂಟು. ಅದೆಂದರೆ ಹಲ್ಲುಗಳ ಕ್ಷೀಣತೆ. ಇದನ್ನು ವ್ಯಂಗ ರೀತಿಯಲ್ಲಿ ಹೇಳುವದಾದರೆ ಮನುಷ್ಯನು ಎಷ್ಟು ಸುಧಾರಕನಾಗುವನೋ ಅಷ್ಟೇ ಅವನ ಹಲ್ಲುಗಳು ಕ್ಷೀಣತೆಯನ್ನು ಹೊಂದುತ್ತವೆ. ಅಂದರೆ ಸಮಾಜದ ಅವನತಿ ಇಷ್ಟು ದಿವಸಗಳ ವರೆಗೆ ಹಲ್ಲುಗಳ ಕ್ಷೀಣತೆಯ ಮಾತು ಚರ್ಚೆಯ ವಿಷಯವಾಗಿತ್ತು. ಆದರೆ ಈಗ ಅದರ ಮೂಲಗುಟ್ಟು ಹೊರಬಿದ್ದಂತಾಗಿದೆ. ಡಾ. ಎನ್. ಎಮ್. ಗಟರಿಜ್ (Dr. N. M Gutteridge) ಮೊದಲಾದ ತಜ್ಞರು ಯಾವದೇ ತರದ ಭಯಂಕರ ರೋಗಗಳಿಗೆ ಅಂದರೆ ಡಾಯಾಬೆಟಿಕ್ (Dialetic.) ಸಂಧಿವಾತ (Arthrities) ಗಳಿಗೆ ಈ ಸಕ್ಕರೆಯ ಮತ್ತು ಗೋದಿ ಮೊದಲಾದ ಪದಾರ್ಥಗಳ ಅತಿ ಸೇವನೆಯೇ ಕಾರಣವೆಂದು ಅಸ್ಟ್ರೇಲಿಯಾ ಹಾಗು ಅಮೇರಿಕಾ ಪತ್ರಿಕೆಗಳಲ್ಲಿ ಪ್ರಸಿದ್ಧಿಸಿದ್ದಾರೆ ಕೆಲವು ಚರ್ಮರೋಗ; ಕಣ್ಣುಬೇನೆ, ಕರುಳಿನ ಬೇನೆಗಳಿಗೆ ಸಕ್ಕರೆ ಹೆಚ್ಚಾಗಿದ್ದ ಪದಾರ್ಥಗಳನ್ನು ತಿನ್ನುವದೇ ಕಾರಣ. ಸೆರೆಯು ಎಷ್ಟು ಅಪಾಯಕರವೋ ಅಷ್ಟೇ ಹೆಚ್ಚು ಸಕ್ಕರೆಯನ್ನು ಸೇವಿಸುವದು ಅಪಾಯಕರ.

ಆದಕಾರಣ—ಹೆಚ್ಚು 'ಸಕ್ಕರೆಯು ದೊರಕದ್ದಕ್ಕೆ ನೀವೆಲ್ಲರೂ ಕೃತಜ್ಞರಾಗಬೇಕಾಗಿಲ್ಲವೇ ?

## ಬಂಗಾರಕ್ಕಿಂತ ಯುರೇನಿಯಮ್ ಹೆಚ್ಚಾಗಿದೆ

ಅಟಂ ಬಾಂಬು ತಯಾರಾಗುವ ಮತ್ತು ಉಪಯೋಗಿಸುವ ವರೆಗೆ ಯುರೇನಿಯಮ್ ಧಾತುವು ಕಣಿಗಳಲ್ಲಿಯ ಕೆಳದರ್ಜೆಯ ಹುಟ್ಟುವಳಿಯಾಗಿದ್ದಿತು. ಇದು ಆಫ್ರಿಕಾ ಹಾಗೂ ಕಾನಡಾ ದೇಶಗಳಲ್ಲಿಮಾತ್ರ ಅಸ್ತಿತ್ವದಲ್ಲಿತ್ತು. ಆದರೆ ಪರಮಾಣುವಿನ ಶಕ್ತಿ Atomic energy ಯ ದಿಗ್ದರ್ಶನವಾದ ಮೇಲೆಯೇ ಅದರ ಮಹತ್ವ ಕಂಡುಬಂದಿತು. ಈಗಾಗಲೇ ಸರಕಾರದವರು ಯುರೇನಿಯಮ್ ಧಾತುವಿನ ಕಣಿಗಳನ್ನು ತಮ್ಮ ವಶದಲ್ಲಿ ತೆಗೆದುಕೊಳ್ಳಬೇಕೆಂಬ ವಿಚಾರ ನಡಿಸಿದ್ದಾರೆ. ಈ ಧಾತುವಿನ ಸಂಗ್ರಹದಲ್ಲಿ ಮೊದಲನೆಯದು ಹಿಂದುಸ್ತಾನ ದೇಶ. ಅದೂ ತ್ರಾವಣಕೋರ ಸಂಸ್ಥಾನ. ಆ ನಂತರ ಆಫ್ರಿಕೆಯ ಕಟಂಗಾ ಜಿಲ್ಹೆಗಳು, ಕಾನಡಾ, ಕೊಲೊರಾಡೋ ಮೊದಲಾದವುಗಳು ಗ್ರ್ಯಾನೈಟವಾದರೂ ಯುರೇನಿಯಮ್ ಅಂಶಯುಕ್ತವಾಗಿರುತ್ತದೆ. ಮಹಾಸಾಗರಗಳಲ್ಲಿಯಾದರೂ ಇರುತ್ತದೆ. ಬಂಗಾರದ ಸಾವಿರ ಪಾಲು ಹೆಚ್ಚು ಯುರೇನಿಯಮ್ ಧಾತು ಭೂಗರ್ಭದಲ್ಲಿದೆ. ಅದೇರೀತಿ ಬೆಳ್ಳಿ ಪಾದರ, ಆಯುಡೋಡಿನ್ ಮೊದಲಾದವುಗಳಿಗಿಂತ ಹೆಚ್ಚಾಗಿದೆ. ಕಾರಣ ಯುರೇನಿಯಮ್ ಧಾತುವಿನ ಸಂಗ್ರಹವು ಬರಿದಾಗುತ್ತದೆಂಬ ಭಯವಿಲ್ಲ. ಚಿಕ್ಯಾಗೋ ಪರಮಾಣು ತಜ್ಞರ ಪ್ರಕಾರ ೧೫ ದಷ್ಟು ಬಂಗಾರವುಳ್ಳ ಮೂಲ ಧಾತುವನ್ನು ಅಗೆಯಲಾಗುತ್ತಿದೆ. ಇಂಥ ಮೂಲ ಧಾತುವು ಹೆಚ್ಚಾಗಿರುತ್ತದೆ. ಸಮಾಜವು ಬಯಸಿದರೆ ಯುರೇನಿಯಮ್ ಬಂಗಾರದಷ್ಟೇ ಮಹತ್ವ ಅಥವಾ ಬೆಲೆಯುಳ್ಳದ್ದಾಗಿ ಪರಿಗಣಿಸಬಹುದು.

ಅಗ್ಗ ಪರಮಾಣು ಶಕ್ತಿಯ ಪೂರೈಕೆಯ ಸಲುವಾಗಿ ಅಪರಿಮಿತ ಯುರೇನಿಯಮ್ ಧಾತುವನ್ನು ಹೊರಡಿಸಬಹುದು. ಅತಿ ಸ್ವಲ್ಪ ಯುರೇನಿಯಮ್‌ವುಳ್ಳ ಬಹಳ ಮೂಲಧಾತುವನ್ನು ಅಗಿಯಬೇಕಲ್ಲದೆ ಇತರ ಆತಂಕಗಳನ್ನು ಎದುರಿಸಬೇಕಾಗುವದು. ಒಂದು ಟನ್ ಯುರೇನಿಯಮ್ ದೊರಕಿಸುವದರ ಸಲುವಾಗಿ ೫೦,೦೦೦ ದಿಂದ ೩೫೦,೦೦೦ ಟನ್ನಷ್ಟು ಮೂಲಧಾತುವನ್ನು ಅಗೆದು ಹುಡುಕಬೇಕಾಗುವದು. ಇವರ ಸಲುವಾಗಿ ಜಡವಾದ ಯಂತ್ರೋಪಕರಣಗಳು, ಕೆಲಸಗಾರರ ಸಮುದಾಯ, ಬಹಳ ಸ್ಫೋಟದ್ರವ್ಯಗಳು ಹಾಗೂ ರಾಸಾಯನಿಕ ದ್ರವ್ಯಗಳು ಮತ್ತು ದೊಡ್ಡ ಪ್ರಮಾಣದಲ್ಲಿ ಸಾರಿಗೆಯ ಸವಲತ್ತುಗಳು ಬೇಕಾಗುತ್ತವೆ.

## ಧ್ರುವಗಳಲ್ಲಿಯ ಮಂಜು ಗಡ್ಡೆಗಳನ್ನು ಕರಗಿಸಬಹುದೇ ?

ರಾಕಿ ಇಡಿ ರಿಕನ್‌ಬೇಕರನ ಹಾಗೂ ಭೂಗೋಲ ತಜ್ಞರ ಸೂಚನೆಯ ಪ್ರಕಾರ ಉತ್ತರ-ದಕ್ಷಿಣ ಧ್ರುವಗಳಲ್ಲಿಯ ಮಂಜುಗಡ್ಡೆಗಳನ್ನು ಕರಗಿಸುವ ಶಕ್ಯಾಶಕ್ಯತೆಯ ಬಗ್ಗೆ ಬಾಂಬಿನ ವಿಭಾಗವು ಶಂಕೆಯನ್ನು ಎತ್ತಿದೆ. ಅದರಂತೆ ತಮ್ಮ ಕೆಲವು ಓದುಗರು ಈ ಪ್ರಶ್ನದ ಬಗ್ಗೆ ಅಶಕ್ಯತೆಯನ್ನು ಬಗೆದಿದ್ದಾರೆಂದು ಅಮೇರಿಕೆಯ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದೆ. ಆ ಸ್ಥಳದಲ್ಲಿ ಬಾಂಬುಗಳು ತಮ್ಮ ಕೆಲಸವನ್ನು ತೀರಿಸಿದ ಮೇಲೆ ಬಂಗಾರ, ಕಲ್ಲಿದ್ದಲಿ ಹಾಗೂ ಇತರ ಕಣಿಗಳ ಮೂಲಧಾತುಗಳ ಸಲಿಗೇನಸಕ್ಯಾಗಿ ಪ್ರೊ. ರಾಯಮಂಡ (Prof. Raymond) ಇಲಿಕ್‌ಸನರು ಕೆಲವು ಅಂಕಿ ಸಂಖ್ಯೆಗಳನ್ನು ಕೊಟ್ಟಿರುತ್ತಾರೆ.

ಈಗ ತಿಳಿದ ಮಟ್ಟಿಗೆ ಧ್ರುವಗಳಲ್ಲಿಯ ಬರ್ಫವು ೧,೮೦೦೦ ಫೂ ದಪ್ಪ ಹಾಗೂ ೫೨,೦೦೦,೦೦೦ ಚೌರಸ ಮೈಲು ಹಬ್ಬಿರುತ್ತದೆ. ಪ್ರೊ ಇಲಿಕ್‌ಸನ್‌ರ ಗಣಿತದ ಪ್ರಕಾರ—೮೦ ಅಂಶ ಫೇ. ಉಷ್ಣತೆಯಲ್ಲಿ ಈಗಿನ ರೀತಿಯಲ್ಲಿ ಯುರೇನಿಯಮ್ ದೊರಕಿಸಬೇಕಾದರೆ ೧೦೦,೦೦೦ ವರ್ಷಗಳು ಬೇಕಾಗುತ್ತವೆ. ಎಲ್ಲ ಬರ್ಫನ್ನು ಕರಗಿಸುವದರ ಸಲುವಾಗಿ ೩೬೦,೦೦೦ ಸಿಲಿಂಗ ಬಿಲಿಯನ್ ಡಾಲರಗಳು ಬೇಕಾಗುತ್ತವೆ. ಜಪಾನದಲ್ಲಿಯ ಬರ್ಫನ್ನು ಕಿತ್ತೊಗೆಯುವದರ ಸಲುವಾಗಿ ಉಪಯೋಗಿಸಿದ ಪ್ರಮಾಣದ ೩೮,೦೦೦,೦೦೦ ಬಾಂಬುಗಳು ಬೇಕಾಗುತ್ತವೆ !! ಒಂದು ಸಾವಿರ ಚೌರಸ ಮೈಲಿನಷ್ಟು ಮಂಜುಗಡ್ಡೆಯನ್ನು ತೆಗೆಯಬೇಕಾದರೆ ೩,೦೦೦,೦೦೦ ಬಾಂಬುಗಳು ಬೇಕಾಗುತ್ತವೆಯಂತೆ !

## ಆಟಂ ಬಾಂಬಿನ ಪ್ರಕಾಶ ಕಿರಣಗಳ ಶಕ್ತಿಯ ಪರಮಾವಧಿ

ಪರಮಾಣು ಬಾಂಬಿನ ಸ್ಫೋಟ ಕಾಲದಲ್ಲಿ ಉದ್ಭವಿಸುವ ಪ್ರಕಾಶ ಕಿರಣಗಳು ಬಾಂಬಿನ ನಾಶಕತ್ವಕ್ಕೆ ಪುಟಕೊಡುವದೆಂದು ಬ್ರಿಟಿಶರ ಹಸ್ತಗತ ಪ್ರದೇಶದಲ್ಲಿರುವ ಒಬ್ಬ ಜರ್ಮನ್ ಪರಮಾಣು ತಜ್ಞ ಪ್ರಾಧ್ಯಾಪಕನೊಬ್ಬನು ನುಡಿದಿದ್ದಾನೆ. ಅದರಲ್ಲಿಯ ಪರಮಾಣುಗಳ ಭಿನ್ನತೆಯಿಂದ ೧೦,೦೦೦,೦೦೦ ಡಿಗ್ರಿಗಿಂತ ಹೆಚ್ಚು ಉಷ್ಣತೆಯು ಹೊರಡುತ್ತದೆ. ಇದರಿಂದ ಕಣ್ಣಿನ ಪಥದಲ್ಲಿ ಕಾಣದಷ್ಟು ಪ್ರಕಾಶವು ಹೊರಬೀಳುತ್ತದೆಂಬುದನ್ನು ಕೆಲವರು ಮಾತ್ರ ಬಲ್ಲರು ಈ ಪರಮಾಣು ಬಾಂಬಿನಿಂದ ಉದ್ಭೂತವಾದ ಪ್ರಕಾಶವು ಗೋಡೆಗಳನ್ನು ನಾಶ ಪಡಿಸುವಷ್ಟು ಶಕ್ತಿಯುಳ್ಳದ್ದಾಗಿದೆ.

## ಅಗ್ನಿನಾಶಕ್ಕೆ ನೀರಿನ ಬಾಂಬು!

ಅರಣ್ಯಗಳಿಗೆ ಹತ್ತಿದ ಬೇಗೆಯನ್ನು ನಂದಿಸುವದರ ಸಲುವಾಗಿ ವಿಮಾನಗಳ ಸಹಾಯವನ್ನು ಪಡೆಯುವ ಯುದ್ಧ ಮುಗಿದ ನಂತರದ ವಿಚಾರ ನಡೆದಿದೆ. ಇದು ರೇಡಿಯೋ ಪ್ರಾಗ್ಜಿಮಿಟಿ ಫ್ಯೂಜ (Radio proximity fuse)ದ ಪ್ರಗತಿಯನ್ನವಲಂಬಿಸಿದೆ. ಯಾಕಂದರೆ ಇದು ಒಂದು ನಿಮಿಷಾರ್ಧದಲ್ಲಿ ನೀರಿನಿಂದ ತುಂಬಿದ ಬಾಂಬನ್ನು ಚಲ್ಲಲಿಕ್ಕೆ ಸಹಾಯಕವಾಗುವದು. ಒಕ್ಕಲತನ ಖಾತೆಯ ಮುಖ್ಯಸ್ಥನಾದ ಪಿ. ಎ. ಥಾಮ್ಸನನು ಈ ಮಾರ್ಗವನ್ನು ಹೇಳಿರುವನು. ಇದು ಇತ್ತೀಚಿನ ವಿಚಾರ. ಆದರೆ ಸೈನ್ಯದವರು ಇದರ ಬಗ್ಗೆ ಬಹಳ ಉತ್ಸುಕರಾಗಿದ್ದಾರೆ. ಅವರು ೩,೦೦೦, ೮,೦೦೦ ಅಥವಾ ೧೦,೦೦೦ ಪೌಂಡುಗಳ ಅಳತೆಯ ನೀರಿನ ಬಾಂಬುಗಳನ್ನು ಈ ಕೆಲಸಕ್ಕೆ ಉಪಯೋಗಿಸಲು ಸಿದ್ಧರಿದ್ದಾರೆ. ಇದರ ವಿಚಾರವು ರೇಡಿಯೋ ಫ್ಯೂಜದ ಪ್ರಗತಿಯನ್ನವಲಂಬಿಸಿದೆ. ಅವರು ಈ ರೇಡಿಯೋ ಸೆಟ್ಟುಗಳಿಂದ ಮಾಡಲು ನಿಶ್ಚಯಿಸಿದ ಎತ್ತರದಿಂದ ಬೆಂಕಿ ಹಬ್ಬಿದ ಸ್ಥಾನದಲ್ಲಿ ಬಾಂಬಿನಿಂದ ನೀರನ್ನು ಎಸೆಯುತ್ತಾರೆ. ಇದು ದೊಡ್ಡ ಪ್ರಮಾಣದ ಅಗ್ನಿಯನ್ನು ನಾಶ ಮಾಡಲಿಕ್ಕೆ ಸಹಾಯವಾಗುವದು.

## ಹೂವು

ಅಳಕುತಲಿದೆ ಮನ ಬಳಕುತಲಿದೆ
ನಿನಗಾಗಿಯೆ ತಳಮಳಗೊಳುತಲಿದೆ
ಪರಿಮಳಪೂರಿತ ದಳವಿಹ ಹೂವೇ
ಸರಿಯೆನಿಸದು ನಿನಗೀ ಸ್ಥಳವು

ರೂಪವನು ಧರಿಸುವ ಹೃದಯವು, ಹೂವಿನ
ಹೃದಯದ ತೆರದಂತಿರಬೇಕು,
ಕೋಗಿಲೆ ಚಿಗುರಿದ ಮಾಮರವಲ್ಲದೆ
ಬಲಿತ ಬೇಂವ್ ಮರವನರಸುವದೆ?

ಹೂವೆಂದೊಡೆ ತಾ ಮಲ್ಲಿಗೆಯಲ್ಲ
ಗುಲಾಬಿಯೊಂದೇ ಹೂವಲ್ಲ;
'ಸ್ತ್ರೀ' ಎನ್ನುವದೂ ಹೂ ಒಂದು
ಹೃದಯದ ಹೂವೇ ಅದು ಅಹುದು

'ಹೃದಯವೆ ಹೂವು' ಎನ್ನುವ ಹೂವದು
ಹೃದಯ ಕಮಲದೊಳು ನೆಲಸಿಹುದು,
ಸ್ಥಿರವಾಗುಳಿಯಲು ಹೃದಯವಾ ಹೂವಿನ
ಹೃದಯದ ತೆರದಂತಿರಬೇಕು:

ಒಣಮರದಲಿ ನೀನರಳಿಹೆ ಹೂವೇ,
ಗುಣವೆನಿಸದು ನಿನಗೀ ಸ್ಥಳವು
ಪರಿಮಳಪೂರಿತ ದಳವಿಹ ಹೂವೇ,
ಸರಿ ಎನಿಸದು ನಿನಗೀ ಸ್ಥಳವು

ಲೇಖಕ:— ಕೆ. ವೀರಯ್ಯಾ ಶಿಗ್ಗಾಂವ

* * * *

## ನಾಡಗುಡಿ

ಎನಿತು ಶೃಂಗಾರವಮ್ಮ !
ನಿನ್ನೊಲುಮೆಯಂದದಲಿ ತಾರಾಡುತಿರುವಂದು।
ಎನಿತು ಗೌರವ ನಿನಗೆ !
ಸಗ್ಗ ಮಂಡಲದೊಳಗೆ ನಲ್ಮೆಯಿಂ ಮೆರೆವಂದು।
ಎಲೆ ತಾಯೆ ಶಾರದೆಯೆ ವೀಣೆ ದುರ್ಗೆಯೆ ಶಕ್ತಿ।
ಎಲೆ ಮಾತೆ ಜಗದಂಬೆ ರುದ್ರ ಭಯಂಕರಿಯೇ।
ಸೌಮ್ಯದಿಂ ನಲಿಯುತಿರೆ ಉತ್ಸಾಹ
ಹೊಮ್ಮುತಿದೆ।
ರಮ್ಯತೆಯು ಬಾಂದಳದೆ ಜಗಕೆಲ್ಲ ಚಿಮ್ಮುತಿದೆ।
ಪಟಪಟನೆ ಪಟಯುತಿರು
ನಲ್ಮೆಯಿಂ ನಲಿಯುತಿರು—
—ಓ ನಾಡಗುಡಿಯೇ ॥೧

ಮೂರು ಬಣ್ಣಗಳುಂಟು,
ರಾಟೆ ಮಧ್ಯದಲುಂಟು
ನೂರಾರು ಯೋಗಿಗಳ ತ್ಯಾಗ ನಿನ್ನಡಿಗುಂಟು।
ವೀರ ಮಣಿಗಳು ನಿನ್ನ ಪಾದಾರವಿಂದದಲಿ
ಎರೆದ ನೆತ್ತರ ಧಾರೆಯುಂಟು।
ಕ್ರೂರ ಹಸಿವಿನ ಘಾತ ಸಹಿಸಲಾರದೆ ಬಿದ್ದ
ಕೋಟಿ ಮಕ್ಕಳ ಮರುಕವುಂಟು।
ಒಗ್ಗಟ್ಟು ಒಡೆವವರ ತೊಡರುಗಳ ಗಂಟುಂಟು।
ಮುಗ್ಗಟ್ಟು ಸಡಲಿಸುವ ಸುಮತಿಯರ
ಮತಿಯುಂಟು।
ಮನೆ ಮಠವು ನಗರ ಮಂದಿರವೆಲ್ಲ
ನಿನ್ನಿಂದ ಶೋಭಿಸಿವೆ।
ನೀನೆಂದು ? ರಾಜಧಾನಿಯ ಕೊತ್ತಳದಿ
ಮಿರುಗಲಿಹೆ,
— ಓ ನಾಡಗುಡಿಯೇ ॥೨॥

ಕೆ ಎನ್. ರಾವ್ ಸಿರಸಿ

## ಆಚಾರ್ಯ ಕೃಪಲಾಣಿ ಕಾಂಗ್ರೆಸ್ ಅಧ್ಯಕ್ಷರು
## ಮೌಲಾನಾ ಅಜಾದರು ಓಂತೆಗೆದುಕೊಂಡರು

ಮೌಲಾನಾ ಅಬುಲ್‌ಕಲಂ ಅಜಾದರು ಹಿಂತೆಗೆದುಕೊಂಡದ್ದರಿಂದ ಆಚಾರ್ಯ ಕೃಪಲಾಣಿಯವರು ಅವಿರೋಧವಾಗಿ ಕಾಂಗ್ರೆಸ್ ಅಧ್ಯಕ್ಷರಾಗಿ ಆರಿಸಲ್ಪಟ್ಟರು.







## ನಡುಗಾಲ ಸರಕಾರದ ಪುನರ್ಘಟನೆ

ಮುಸ್ಲಿಂ ಲೀಗಿನವರು ನಡುಗಾಲ ಸರಕಾರದಲ್ಲಿ ಸೇರಲು ನಿರ್ಧರಿಸಿದ್ದರಿಂದ ಅದರ ಪುನರ್ಘಟನೆ ಮಾಡಲಾಗಿದೆ. ಸರ್ ಶಾಫತ ಹಾಗು ಸಯ್ಯದ ಝುಹೀರರು ಮತ್ತು ಶರಚ್ಚಂದ್ರ ಬೋಸರು ರಾಜೀನಾಮೆ ಕೊಟ್ಟದ್ದು ಮುಸ್ಲಿಂ ಲೀಗಿನವರ ಪ್ರತಿನಿಧಿಗಳನ್ನು ಸರಕಾರದವರು ನಡುಗಾಲ ಸರಕಾರದಲ್ಲಿ ಸೇರಿಸಿಕೊಂಡಿದ್ದಾರೆ. ಮುಂದಿನ ವಾರ ಖಾತೆ ಹಂಚುವಿಕೆ ಮೊದಲಾಗಿ ಮಂತ್ರಿಗಳ ಪ್ರತಿಜ್ಞಾವಿಧಿಯು ಜರಗುವದು. ಕಾಂಗ್ರೆಸ್ ಮತ್ತು ಲೀಗಗಳಲ್ಲಿ ಒಡಂಬಡಿಕೆಯನ್ನುಂಟು ಮಾಡಿ ಲೀಗಿನವರು ನಡುಗಾಲ ಸರಕಾರದಲ್ಲಿ ಸೇರುವಂತೆ ಮಾಡಬೇಕೆಂದು ಭೋಪಾಳ ನವಾಬರು ಈ ತಿಂಗಳ ಪ್ರಾರಂಭದಿಂದ ನಡೆಸಿದ ಪ್ರಯತ್ನಕ್ಕೆ ಯಶಸ್ಸು ಸಿಕ್ಕಲಿಲ್ಲ. ಮಾತುಕತೆ ಮುರಿದವು. ಈ ಸಂಬಂಧದಲ್ಲಿ ಜವಾಹ—ಜಿನ್ನಾರವರಲ್ಲಿ ನಡೆದ ಪತ್ರವ್ಯವಹಾರ ಪ್ರಸಿದ್ಧವಾಗಿದೆ. ಅದನ್ನು ನೋಡಿದರೆ ದೇಶದ ಶಾಂತಿ ಸಮೃದ್ಧಿಗಾಗಿ ಲೀಗಿನೊಡನೆ ಒಡಂಬಡಿಕೆ ಮಾಡಿಕೊಳ್ಳಲು ಕಾಂಗ್ರೆಸ್ಸು ಎಷ್ಟು ಪ್ರಯತ್ನ ಮಾಡಿತೆಂಬುದು ಸ್ಪಷ್ಟವಾಗುವದು. ಜಿನ್ನಾರವರ ದುರಾಗ್ರಹದ ಮೂಲಕ ಒಡಂಬಡಿಕೆ ಸಾಧ್ಯವಾಗಲಿಲ್ಲ. ಆದರೆ ವಾಯಿಸರಾಯರ ಮತ್ತು ಪಂಡಿತ ಜವಾಹರಲಾಲರ ಆಕಾಶವಾಣಿ ಭಾಷಣದಲ್ಲಿ ಕೊಡಲಾದ ಆಶ್ವಾಸನದ ಮೇರೆಗೆ ಮುಸ್ಲಿಂ ಲೀಗಿನವರು ನಡುಗಾಲ ಸರಕಾರದಲ್ಲಿ ಸೇರಲು ನಿರ್ಧರಿಸಿ ತಮ್ಮ ೫ ಪ್ರತಿನಿಧಿಗಳ ಹೆಸರನ್ನು ವಾಯಿಸರಾಯರಿಗೆ ತಿಳಿಸಿದರು. ವಾಯಿಸರಾಯರು ಅದಕ್ಕೊಪ್ಪಿಕೊಂಡು ನಡುಗಾಲ ಸರಕಾರದ ಪುನರ್ಘಟನೆ ಮಾಡಿರುವರು. ಮುಸ್ಲಿಂ ಲೀಗಿನವರು ನಡುಗಾಲ ಸರಕಾರದಲ್ಲಿ ಸೇರಲು ನಿರ್ಧರಿಸಿದ್ದು ಅಭಿನಂದನೀಯ ಮತ್ತು ಸ್ವಾಗತಾರ್ಹವಾಗಿದ್ದರೂ ಅವರು ಅನುಸರಿಸಿದ ಮಾರ್ಗ ಮಾತ್ರ ಸರಿಯಾಗಿರುವುದಿಲ್ಲ. ಕಾಂಗ್ರೆಸ ಲೀಗುದಳಲ್ಲಿ ಒಡಂಬಡಿಕೆಯಾಗಿ ಪರಸ್ಪರ ಒಪ್ಪಿಗೆಯಿಂದ ನಡುಗಾಲ ಸರಕಾರದ ಪುನರ್ಘಟನೆಯಾಗಿದ್ದರೆ ಹೆಚ್ಚು ಒಳ್ಳೆತಾಗಿತ್ತು. ಈಗ ವಾಯಿಸರಾಯರ ಕೈಯಲ್ಲಿಯ ವಿಶೇಷಾಧಿಕಾರಕ್ಕೆ ಶರಣು ಹೋಗುವ ಸಿದ್ಧತೆಯಿಂದ, ಇಲ್ಲವೆ ಅದರ ಬೆಂಬಲದ ಒಲುಮೆಯಿಂದ ಜಿನ್ನಾ ಸಾಹೇಬರು ನಡುಗಾಲ ಸರಕಾರದಲ್ಲಿ ಸೇರಿದ್ದು ದುರ್ದೈವದ ಸಂಗತಿಯಾಗಿದೆ. ಇದರಿಂದ ಹಿಂದುಸ್ತಾನದ ಭಾವೀ ಪ್ರಗತಿಗೆ ಅತ್ಯಂತ ಅಡ್ಡಿಯಾಗುವುದೆಂದು ಬೇರೆ ಹೇಳಬೇಕಾಗಿಲ್ಲ. ಅದರೂ ಭಿನ್ನಾಭಿಪ್ರಾಯದ ಪ್ರಸಂಗಗಳನ್ನು ಆದಷ್ಟು ಪರಸ್ಪರ ವಿಚಾರವಿನಿಮಯ, ಕೊಡತಕ್ಕೊಳ್ಳುವಿಕೆಗಳಿಂದಲೆ ಸರಿಪಡಿಸಿಕೊಳ್ಳಬೇಕಲ್ಲದೆ ವಾಯಿಸರಾಯರಿಗೆ ಶರಣುಹೋಗುವ ಮನೋವೃತ್ತಿಯನ್ನು ತಾಳಬಾರದೆಂದು ಕೇಳಿಕೊಳ್ಳಬೇಕಾಗಿದೆ. ಮುಸ್ಲಿಂ ಲೀಗಿನವರು ಇನ್ನಾದರೂ ಜಾತೀಯ ಭಾವನೆಯನ್ನು ಬಿಟ್ಟುಗೊಟ್ಟು ಇಡೀ ರಾಷ್ಟ್ರದ ಹಿತವನ್ನೆ ಮುಖ್ಯವಾಗಿಟ್ಟುಕೊಂಡು ನಡುಗಾಲ ಸರಕಾರದಲ್ಲಿ ವರ್ತಿಸಬೇಕೆಂದೂ ಕೇವಲ ಹೋರಾಟ ನಡಿಸುವದೆ ಒಳಗೆ ಸೇರಿದ್ದರ ಮುಖ್ಯ ಉದ್ದೇಶವೆಂದು ಇಟ್ಟುಕೊಳ್ಳಬಾರದೆಂದೂ ಅಗ್ರಹಪಡಿಸುತ್ತೇವೆ.

## ಹರಿಜನ ಪ್ರಾತಿನಿಧ್ಯ ?

ಮುಸ್ಲಿಂ ಲೀಗಿನವರು ನಡುಗಾಲ ಸರಕಾರದ ತಮ್ಮ ಪ್ರತಿನಿಧಿಗಳ ಹೆಸರಿನಲ್ಲಿ ಅಸ್ಪೃಶ್ಯ ಧುರೀಣರೊಬ್ಬರನ್ನು ಸೇರಿಸಿದ್ದು ಬಹಳ ಜನರನ್ನು ಆಶ್ಚರ್ಯಚಕಿತರನ್ನಾಗಿ ಮಾಡಿದೆ. ವಾಯಿಸರಾಯರು ಕೂಡ ಈ ಯಾದಿಯನ್ನು ನೋಡಿ ಚಕಿತರಾದರಂತೆ. ಮೊದಲಿನ ಯಾದಿಯಲ್ಲಿ ಶ್ರೀ ಮಂಡಳರವರ ಹೆಸರು ಇರಲಿಲ್ಲೆಂದೂ ನಾಜೀಮುದ್ದೀನರ ಹೆಸರಿತ್ತೆಂದೂ ಹೇಳಲಾಗುತ್ತದೆ. ಅಷ್ಟೇ ಏಕೆ ಬಿ. ಬಿ. ಸಿ. ಯು ಲಂಡನದಿಂದ ಆ ಹೆಸರಗಳನ್ನು ಕೂಡ ಸಾರಿಬಿಟ್ಟಿತು. ಆದರೆ ಜಿನ್ನಾ ಸಾಹೇಬರು ಕೊನೆಯ ಗಳಿಗೆಯಲ್ಲಿ ತಮ್ಮ ಯಾದಿಯಲ್ಲಿ ಬದಲಾವಣೆ ಮಾಡಿ ಅಸ್ಪೃಶ್ಯರ ಪ್ರತಿನಿಧಿಯೊಬ್ಬರನ್ನು ಸೇರಿಸಿಕೊಂಡಿರುವರು. ಹಿಂದುಸ್ತಾನದಲ್ಲಿ ಹಿಂದು-ಮುಸಲ್ಮಾನ ಎರಡು ಜನಾಂಗಗಳಿವೆಂದು ಹೇಳುತಿರುವ ಜಿನ್ನಾ ಸಾಹೇಬರು ಅಸ್ಪೃಶ್ಯರು ತಮ್ಮ ಪ್ರತಿನಿಧಿಯೆಂದು ಹೇಗೆ ಭಾವಿಸುವರೊ ತಿಳಿಯದೆಂದು ಮಹಾತ್ಮಾಗಾಂಧಿಯವರು ಅಭಿಪ್ರಾಯ ಪಟ್ಟಿದ್ದಾರೆ. ಬಂಗಾಲದಲ್ಲಿ ಮುಸ್ಲಿಂಲೀಗ ಮಂತ್ರಿಮಂಡಳದ ಪರಿಸ್ಥಿತಿ ಅಷ್ಟೊಂದು ಆಶಾದಾಯಕವಿಲ್ಲದ್ದರಿಂದ ಹರಿಜನರ ಬೆಂಬಲ ಪಡೆಯಬೇಕೆಂದು ಜಿನ್ನಾರವರು ಹಾಗೆ ಮಾಡಿರಬಹುದು. ಅವರ ಉದ್ದಿಷ್ಟ ಎಷ್ಟರಮಟ್ಟಿಗೆ ಸಾಧಿಸುವದೊ ನೋಡಬೇಕಾಗಿದೆ. ಪಾಕಿಸ್ತಾನವನ್ನು ಪಡೆಯಬೇಕಾದರೆ ಮುಸ್ಲಿಂ ಲೀಗಿನವರೊಬ್ಬರೆ ಸಮರ್ಥರಾಗರಾರರು. ಅಂಬೇಡಕರ ಪಕ್ಷದ ಅಸ್ಪೃಶ್ಯರ ಸಹಾಯವೂ ಅವಶ್ಯವೆಂದು ಜಿನ್ನಾರವರು ಭಾವಿಸಿರುವರೂ ಏನೊ ತಿಳಿಯದು. ಈ ನಡುಗಾಲ ಸರಕಾರದ ಪುನರ್ಘಟನೆಯ ಸಂಬಂಧದಲ್ಲಿ ಹೊರಟ ಸರಕಾರಿ ಪ್ರಕಟನೆಯಲ್ಲಿ ಮಂತ್ರಿಮಂಡಳವೆಂಬ ಶಬ್ದ ಹಾಕಿದ್ದರಿಂದ ಜಿನ್ನಾ ಸಾಹೇಬರು ಸಂಯುಕ್ತ ಹೊಣೆಗಾರಿಕೆಗೆ ಒಪ್ಪಿಗೆಕೊಟ್ಟಿರುವರೆಂದು ಗೊತ್ತಾಗುವದು. ಪ್ರತ್ಯಕ್ಷ ಹೋರಾಟದ ಧೋರಣ ವಹಿಸುವ ಮೊದಲೆ ಮುಸ್ಲಿಂ ಲೀಗಿನವರು ಈಗಿನ ನಿರ್ಧಾರಕ್ಕೆ ಬಂದಿದ್ದರೆ ಈ ಎರಡು ತಿಂಗಳುಗಳಿಂದ ನಡೆದ ಹತ್ಯಾಕಾಂಡ ನಿಲ್ಲಬಹುದಾಗಿತ್ತು. ಆದರೆ ದೇಶದ ದುರ್ದೈವ ಇನ್ನೂ ತೀರಿರಲಿಲ್ಲದ್ದರಿಂದ ಮುಸ್ಲಿಂಲೀಗ ನಡುಗಾಲ ಸರಕಾರದಲ್ಲಿ ಸೇರಬೇಕಾದರೆ ಇಷ್ಟೊಂದು ಬಲಿಕೊಡಬೇಕಾಯಿತು. ಇನ್ನಾದರೂ ಈ ಹತ್ಯಾಕಾಂಡ ನಿಂತು ದೇಶವು ಶಾಂತಿ ಸುಖ ಸಮೃದ್ಧಿಯಲ್ಲಿ ಲೋಲಾಡಲಿ ಎಂದೇ ಈ ಸಮಯದಲ್ಲಿ ಎಲ್ಲರೂ ಹಾರೈಸಬಹುದಾಗಿದೆ.

ಸಂಪಾದಕೀಯ * * * * * *

# ಟೀಕೆ-ಟಿಪ್ಪಣೆಗಳು

## ನೌಖಾಲಿಯಲ್ಲಿ ಪುಂಡಾಟಿಕೆ

ಹಿಂದುಸ್ತಾನದ ರಾಜಧಾನಿಯಲ್ಲಿ ಕಾಂಗ್ರೆಸ್ ಲೀಗ ಸಂಧಾನದ ಮಾತುಕತೆ ನಡೆದಿರುವಾಗಲೆ ಬಂಗಾಲ ಪ್ರಾಂತದ ನೌಖಾಲಿ ಜಿಲ್ಹೆಯಲ್ಲಿ ರಕ್ತದ ಹೊಳೆ ಹರಿದದ್ದನ್ನೋದಿ ಯಾರಿಗಾದರೂ ವ್ಯಸನವಾಗದಿರಲಾರದು. ಆ ಜಿಲ್ಹೆಯ ೨೦೦ ಚಚ್ಚೌಕು ಮೈಲು ಪ್ರದೇಶದಲ್ಲಿ ಕೊಲೆ ಸುಲಿಗೆ, ಕೊಳ್ಳಿ, ಹಚ್ಚುವದು. ಸ್ತ್ರೀಯರ ಮಾನಭಂಗ, ಅಪಹಾರ ಮೊದಲಾದ ಹೀನ ಕೃತ್ಯಗಳು ನಡೆದುವೆಂದು ಪ್ರಸಿದ್ಧವಾಗಿದೆ. ೧೦ನೇ ತಾರೀಖಿಗೆ ಈ ದುರ್ಘಟನೆಗಳು ನಡೆದಿದದ್ದರೂ ೧೪ನೇ ತಾರೀಖಿನ ವರೆಗೆ ಸರಕಾರಕ್ಕೆ ಕೂಡ ಈ ಸಂಗತಿ ಗೊತ್ತಾಗಿರಲಿಲ್ಲೆಂದು ಹೇಳಲಾಗುತ್ತದೆ. ಕಲಕತ್ತೆಯಲ್ಲಿ ಇಷ್ಟೊಂದು ಭೀಷಣ ಪರಿಸ್ಥಿತಿ ಇದ್ದು ದಿನಾಲು ಇರಿತ ಮೊದಲಾದವುಗಳು ನಡೆದೆ ಇದ್ದರೂ ನೌಖಾಲಿಯಂಥ ಗಂಡಾಂತರದ ಜಿಲ್ಹೆಯಲ್ಲಿ ಸರಕಾರದವರು ಸಾಕಷ್ಟು ದಕ್ಷತೆ ವಹಿಸವಿದ್ದುದು ಶೋಚನೀಯ ಸಂಗತಿಯಾಗಿದೆ. ಈ ಬಗ್ಗೆ ಅನೇಕ ಜನರು ಮೊದಲು ಎಚ್ಚರಿಕೆ ಕೊಟ್ಟಿದ್ದರೂ ಸರಕಾರದವರು ಅತ್ತ ಲಕ್ಷ ಪೂರೈಸದಿದ್ದುದು ಮತ್ತಷ್ಟು ಆಶ್ಚರ್ಯಕರವಾಗಿದೆ. ಜನತೆಯ ವಿತ್ತ ಜೀವಿತಗಳ ರಕ್ಷಣೆಯ ಹೊಣೆ ಹೊತ್ತ ಸರಕಾರದವರು ಇಂತು ಮೈಮರೆತು ಕುಳಿತರೆ ದೇಶದಲ್ಲಿ ನೆಮ್ಮದಿಯೆಂತು ಉಳಿಯಬಲ್ಲುದು? ಪುಂಡಾಟಿಕೆ ನಡೆದ ನಂತರವೂ ಸಾಕಷ್ಟು ಪೋಲಿಸ ಮತ್ತು ಸೈನ್ಯವನ್ನು ಬೇಗನೆ ಕಳಿಸಿದ್ದರೆ ಇಷ್ಟು ಅನರ್ಥಗಳಾಗುತಿರಲ್ಲೆಂದು ಅಖಿಲಚಂದ್ರದತ್ತ ಇವರು ಅಭಿಪ್ರಾಯಪಟ್ಟಿದ್ದಾರೆ. ಸುದ್ದಿ ನಿಯಂತ್ರಣದಿಂದ ನೌಖಾಲಿ ದುರಂತದ ವಿವರಗಳು ತಿಳಿಯುವದಿಲ್ಲ. ಕಲಕತ್ತೆಯಲ್ಲಿಯ ಅನರ್ಥಗಳಿಗಿಂತ ಹೆಚ್ಚಿನ ಅನರ್ಥಗಳು ಅಲ್ಲಿ ನಡೆದವೆಂದು ಬಂದವರೊಬ್ಬರು ಹೇಳುವರೆಂದು ಡಾ. ಶ್ಯಾಮಪ್ರಸಾದ ಮುಖರ್ಜಿಯವರು ಪತ್ರದಲ್ಲಿ ಬರೆದಿದ್ದಾರೆ. ಈಘೋರ ಅತ್ಯಾಚಾರದ ಬಗ್ಗೆ ದೊಡ್ಡ ಪ್ರಮಾಣದಲ್ಲಿ ಸಂಘಟಿತ ಪ್ರಯತ್ನ ಸರಕಾರದ ಉತ್ತೇಜನದಿಂದ ನಡೆದಿದ್ದು ಬೇರೆ ಬೇರೆ ಜಿಲ್ಹೆಯಲ್ಲಿಯು ಇದು ಹಬ್ಬುವ ಸಂಭವವಿದೆಂದೂ ಡಾ. ಮುಕರ್ಜಿಯವರು ತಮ್ಮ ಪತ್ರದಲ್ಲಿ ಅಭಿಪ್ರಾಯಪಟ್ಟಿರುವರು. ಬಂಗಾಲದಲ್ಲಿಯ ಈ ಅತ್ಯಾಚಾರದ ಬಗ್ಗೆ ಮಂತ್ರಿ ಮಂಡಳದವರು ಮತ್ತು ಗವರ್ನರರು ಕೂಡಲೆ ವಿಚಾರ ಮಾಡಿ ಅದು ನಿಲ್ಲುವಂತೆ ನೋಡಿಕೊಳ್ಳಬೇಕು. ಮತ್ತು ಈ ಪುಂಡಾಟಿಕೆಯಲ್ಲಿ ಹಾನಿಗೊಂಡವರಿಗೆ ಯೋಗ್ಯ ಪರಿಹಾರ ಕೊಡಬೇಕು. ಬ್ಯಾ. ಜಿನ್ನಾ ಸಾಹೇಬರಾದರೂ ಇತ್ತ ಗಮನಿಸಿ ಮುಸ್ಲಿಂ ಲೀಗ ಪ್ರಾಂತದಲ್ಲಿ ನಡೆದ ಈ ಅನನ್ವಿತ ಪುಂಡಾಟಿಕೆಗೆ ತಡೆಹಾಕುವಂತೆ ನೋಡಿಕೊಳ್ಳಬೇಕೆಂದು ಸೂಚಿಸಬಯಸುತ್ತೇವೆ.

## ಪತ್ರಿಕಾ ಸ್ವಾತಂತ್ರ್ಯ

ಪತ್ರಿಕಾಸಂಪಾದಕ ಪರಿಷತ್ತಿನ ಅಧ್ಯಕ್ಷರಬಿನ್ನಹವನ್ನುಮನ್ನಿಸಿ ಹಿಂದುಸ್ತಾನ ಸರಕಾರದ ಗೃಹ ಮತ್ತು ಸುದ್ದೀ ಖಾತೆಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಸ್ಥಾಯಿ ಸಮಿತಿ ಸದಸ್ಯರನ್ನುದ್ದೇಶಿಸಿ ಕೆಲ ಮಾತುಗಳನ್ನು ಹೇಳಿದರು. ಹಿಂದುಸ್ತಾನದಲ್ಲಿ ಪತ್ರಿಕಾ ಸ್ವಾತಂತ್ರ್ಯವೆಷ್ಟರ ಮಟ್ಟಿಗೆ ಇದೆ, ಸಂಪಾದಕರ ಲೇಖನಿಗೆ ಕಾಯದೆ ಎಂತು ತಡೆಹಾಕುತಿದೆ ಮುಂತಾದ್ದು ಸರ್ವಶ್ರುತ. ಈ ವಿಷಯವನ್ನು ಅಧ್ಯಕ್ಷರಾದ ಶ್ರೀ ತುಷಾರ ಕಾಂತಿಘೋಷರು ಮಂತ್ರಿವರ್ಯರ ಗಮನಕ್ಕೆ ತಂದು ಪತ್ರಿಕಾ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಕಲಮುಗಳನ್ನು ಕೂಡಲೆ ರದ್ದುಪಡಿಸಬೇಕೆಂದು ಕೇಳಿಕೊಂಡರು. ಸರದಾರರು ಕೊಟ್ಟ ಉತ್ತರದಲ್ಲಿಯ ಆಶ್ವಾಸನ ಸ್ವಾಗತಾರ್ಹವಾಗಿದೆ. ಸುದ್ದಿಗಳನ್ನು ಪ್ರಕಟಿಸುವಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಲ್ಲಿ ಪತ್ರಿಕಾ ಸಂಪಾದಕರಿಗೆ ಸ್ವಾತಂತ್ರ್ಯವಿರುವ ಮಟ್ಟದಲ್ಲಿಯೆ ಅವರ ಮೇಲೆ ಹೊಣೆಗಾರಿಕೆಯಿದೆಂಬುದು ಸರ್ವಶ್ರುತ. ಅನೇಕ ಪತ್ರಿಕಾ ಸಂಪಾದಕರು ತಮ್ಮ ಈ ಹೊಣೆಗಾರಿಕೆಯನ್ನರಿಯದ್ದರಿಂದಲೆ ಎಷ್ಟೋ ಸಲ ತಿಕ್ಕಾಟವುಂಟಾಗುವುದುಂಟು. ಇದು ತಪ್ಪಬೇಕಾದರೆ ಸಂಪಾದಕರೂ ತಮ್ಮ ಹೊಣೆಗಾರಿಕೆಯನ್ನರಿತುಕೊಳ್ಳಬೇಕು. ಸರಕಾರದ ಕಾಯದೆಗಳೂ ಸಂಪಾದಕರನ್ನು ಅನವಶ್ಯಕವಾಗಿ ನಿರ್ಬಂಧಕ್ಕೊಳಪಡಿಸಬಾರದು. ಸದ್ಯದ ಮುದ್ರಣ ಕಾಯದೆಯಲ್ಲಿಯ ಕಲಮುಗಳನ್ನು ಪರಾಮರ್ಶಿಸಿ ತಕ್ಕ ಬದಲಾವಣೆಗಳನ್ನು ಮಾಡಬೇಕೆಂದು ಸ್ಥಾಯಿ ಸಮಿತಿಯವರು ಕೇಳಿಕೊಂಡಿದ್ದಕ್ಕೆ ಸರದಾರರು ಒಪ್ಪಿದ್ದು ಮಹತ್ವದ್ದಾಗಿದೆ. ಬಂಗಾಲ ಸರಕಾರ ಕಲಕತ್ತೆಯ ಪತ್ರಿಕೆಗಳ ಮೇಲೆ ಹಾಕಿದಂಥ ನಿರ್ಬಂಧಗಳನ್ನು ಸ್ವತಂತ್ರ ರಾಷ್ಟ್ರದ ಯಾವ ಪತ್ರಿಕೆಗಳೂ ಸಹಿಸವು. ಅದುದರಿಂದ ಸರಕಾರದವರು ಅನವಶ್ಯಕ ನಿರ್ಬಂಧ ಹಾಕುವ ಮನೋವೃತ್ತಿಯನ್ನು ತಳೆಯಬಾರದು. ಅಂದರೆ ಪತ್ರಿಕೆಗಳ ಪ್ರಗತಿಯಾಗಿ ದೇಶಹಿತಕ್ಕೂ ಸಹಾಯವಾಗುವದು.

## ಕರ್ನಾಟಕದಲ್ಲಿ ಉದ್ಯೋಗಾಭಿವೃದ್ಧಿ

ಕರ್ನಾಟಕದಲ್ಲಿ ಭೂ ಖನಿಜ ಸಂಪತ್ತು ಹೇರಳವಾಗಿದ್ದರೂ ಅದರ ಸಾಕಷ್ಟು ಉಪಯೋಗವನ್ನು ಮಾಡಿಕೊಳ್ಳುವಷ್ಟು ಜನತೆ ಮತ್ತು ಸರಕಾರ ಲಕ್ಷ ಪೂರೈಸದ್ದರಿಂದ ಇಲ್ಲಿ ಉದ್ಯೋಗಾಭಿವೃದ್ಧಿಯಾಗಿರುವುದಿಲ್ಲ. ಪ್ರತಿಯೊಂದು ಪದಾರ್ಥಕ್ಕೂ ನಾವು ಎರಡನೆಯವರ ಮೋರೆಯನ್ನು ನೋಡುತ್ತ ಕೂಡಬೇಕಾಗಿದೆ. ಆದರೆ ಹೀಗೆಯೇ ಇನ್ನೂ ಒಂದೆರಡು ವರ್ಷ ಹೋದರೆ ಪರಪ್ರಾಂತೀಯರು ಇಲ್ಲಿ ಉದ್ಯೋಗ ಧಂದೆಗಳನ್ನು ಹೊರಡಿಸಿ ಇಲ್ಲಿನ ಸಂಪತ್ತನ್ನೆಲ್ಲ ಬಳೆದುಕೊಂಡು ಹೋಗಬಹುದು. ಅದುದರಿಂದ ಕರ್ನಾಟಕಸ್ಥರು ಈ ಸಮಯದಲ್ಲಿ ಮುನ್ನುಗ್ಗುವದು ಅತ್ಯವಶ್ಯವಾಗಿದೆ. ಇದೀಗ ನಮ್ಮ ಪ್ರಾಂತದಲ್ಲಿ ಜನತಾ ಸರಕಾರವಿದ್ದುದರಿಂದ ಅದರ ಸಹಾಯದಿಂದ ಬೇಕಾದಷ್ಟು ಉದ್ಯೋಗ ಧಂದೆಗಳನ್ನು ಹೊರಡಿಸಬಹುದಾಗಿದೆ. ಕರ್ನಾಟಕದಲ್ಲಿ ಯಾವ ಯಾವ ಉದ್ಯೋಗಗಳನ್ನು ಹೊರಡಿಸುವದು ಸಾಧ್ಯವಿದೆಂದು ಮುಂತಾದ್ದನ್ನು ವಿಚಾರಿಸುವ ಸಲುವಾಗಿ ಒಕ್ಕಲತನ ಮತ್ತು ಅರಣ್ಯ ಖಾತೆಯ ಮಂತ್ರಿಗಳಾದ ಶ್ರೀ ಪಾಟೀಲ ಪುಲ್ಲನಗೌಡರು ಹುಬ್ಬಳ್ಳಿಗೆ ಬಂದು ಹೋದರು. ಕರ್ನಾಟಕ ವಣಿಕ ಸಂಘದ ಪ್ರಮುಖರನ್ನು ಮತ್ತು ಇತರ ಉದ್ಯೋಗಸ್ಥರನ್ನು ಹಾಗು ಡಾ. ತೆಂಡುಲಕರರನ್ನು ಭೆಟ್ಟಿಯಾಗಿ ವಿಚಾರವಿನಿಮಯ ಮಾಡಿದರು. ಕರ್ನಾಟಕದಲ್ಲಿ ಲಕ್ಷ್ಮೀಪುತ್ರರು ಅನೇಕರಿದ್ದರೂ ತಮ್ಮ ಹಣವನ್ನು ಉದ್ಯೋಗ ಧಂದೆಗಳಲ್ಲಿ ತೊಡಗಿಸಲು, ಪ್ರಸಂಗ ಬಂದರೆ ಉದ್ಯೋಗ ಧಂದೆಗಳಲ್ಲಿ ಕೆಲವು ಕಳೆದುಕೊಳ್ಳಲು ಸಿದ್ಧರಿದ್ದ ಜನರು ಕಡಮೆ. ಅಂತೆಯೇ ಇಲ್ಲಿ ಉದ್ಯೋಗ ಧಂದೆಗಳು ಹೊರಡದಂತಾಗಿವೆ. ಆದರೆ ಸರಕಾರದವರ ಮತ್ತು ಪ್ರಮುಖ ಧನಿಕರ ಆಶ್ವಾಸನ ದೊರೆತದ್ದಾದರೆ ಉಳಿದವರೂ ಹಣ ಹಾಕಲು ಮುಂದೆ ಬರಬಹುದು. ಕರ್ನಾಟಕದಲ್ಲಿ ಕೃತ್ರಿಮ ರೇಶಿಮೆ, ಕಾಗದ, ಸಿಮೆಂಟ ಮೊದಲಾದ ಕಾರಖಾನೆಗಳನ್ನು ಕೂಡಲೆ ತೆಗೆಯಬಹುದಾಗಿದೆಂದು ಡಾ. ತೆಂಡುಲಕರರು ಹೇಳಿದರು. ಸಾಧ್ಯವಿದ್ದ ಮಟ್ಟಿಗೆ ಸರಕಾರದ ಸಹಾಯವನ್ನು ದೊರಕಿಸಿ ಕೊಡುವದಾಗಿ ಮಂತ್ರಿವರ್ಯರು ಅಪ್ಪಣೆ ಕೊಡಿಸಿರುವರು. ಅದುದರಿಂದ ಕರ್ನಾಟಕದಲ್ಲಿಯ ಉದ್ಯೋಗಪ್ರಿಯ ಧನಿಕರು ಮುಂದೆಬಂದು ಕರ್ನಾಟಕದಲ್ಲಿ ಬೇರೆ ಬೇರೆ ಉದ್ಯೋಗ ಧಂದೆಗಳನ್ನು ಹೊರಡಿಸುವಲ್ಲಿ ಸಂಘಟಿತ ಪ್ರಯತ್ನ ಮಾಡಬೇಕೆಂದು ಅಗ್ರಹಪಡಿಸುತ್ತೇವೆ.

## ಶಾಂತಿ ಪರಿಷತ್ತಿನ ಫಲಶ್ರುತಿ

ಪ್ಯಾರಿಸಿನಲ್ಲಿ ಕಳೆದ ೨೫ ತಿಂಗಳುಗಳಿಂದ ವಿಚಾರವಿನಿಮಯ ನಡೆಸಿದ ಶಾಂತಿ ಪರಿಷತ್ತು ಕಳೆದ ೧೫ ನೇ ತಾರೀಕು ಮುಕ್ತಾಯವಾಗಿ ಮುಂದಿನ ಮಿತ್ರ ರಾಷ್ಟ್ರಗಳ ಪರಿಷತ್ತಿಗೆ ಮಾರ್ಗವನ್ನು ಸುಗಮ ಮಾಡಿಕೊಟ್ಟಿತು. ಪ್ರಬಲ ರಾಷ್ಟ್ರಗಳು ಇನ್ನೂ ತಮ್ಮ ಸ್ವಾರ್ಥ ಧೋರಣ ಬಿಟ್ಟುಗೊಟ್ಟಿಲ್ಲಾದ್ದರಿಂದ ಜಾಗತಿಕ ಶಾಂತಿಗೆ ಅಡೆತಡೆಗಳುಂಟಾಗುತಿವೆ. ಯುದ್ಧವನ್ನು ಗೆಲಯಬೇಕೆಂಬಲ್ಲಿ ಮಿತ್ರ ರಾಷ್ಟ್ರಗಳು ಯಾವ ಉತ್ಸಾಹ, ಐಕ್ಯ ಭಾವನೆಗಳನ್ನು ತಳೆದಿದ್ದವೊ ಅದೇ ಐಕ್ಯ ಭಾವನೆಯಿಂದ ಶಾಂತಿಗಾಗಿ ಪ್ರಯತ್ನಿಸಿದರೆ ಅದು ಬೇಗ ಸಫಲವಾಗಬಹುದು. ಆ ಬಗೆಯ ಧೋರಣ ವಹಿಸದೆ ಕೇವಲ ತೋರಿಕೆಗಾಗಿ ಶಾಂತಿಯ ಮಾತುಗಳನ್ನಾಡಿ ಮತ್ತೆ ದಬ್ಬಾಳಿಕೆ, ಜುಲುಮೆ, ಸುಲಿಗೆಯ ಧೋರಣ ವಹಿಸಿದರೆ ಜಗತ್ತಿನಲ್ಲಿ ಶಾಂತಿ ಎಂದೂ ಪ್ರಸ್ಥಾಪಿತವಾಗದು. ಈ ಪರಿಷತ್ತಿನ ಅಧ್ಯಕ್ಷತೆ ವಹಿಸಿದ್ದ ಚೀನದ ಡಾ. ಕೊಟಾಯಿ ಚಾಯರು ಉಪಸಂಹಾರ ಭಾಷಣದಲ್ಲಿ ಹೇಳಿದ ಮಾತುಗಳು ಅರ್ಥಪೂರ್ಣವಾಗಿವೆ. ಪ್ರಬಲ ರಾಷ್ಟ್ರಗಳು ಯಾವಾಗಲೂ ವಿಚಾರ ಮಾಡತಕ್ಕಂಥವುಗಳಾಗಿವೆ. 'ಅವಿಭಾಜ್ಯ ಜಗತ್ತಿನಲ್ಲಿ ನಾವಿಂದು ಇರುವೆವು. ಜಗತ್ತಿನಲ್ಲಿ ನ್ಯಾಯ ಮಾನವತೆ, ವಿವೇಕ ಓರಣಗಳು ಸ್ಥಾಪಿತವಾಗಬೇಕಾದ ಕಾಲ ಬಂದಿದೆ' ಪರಸ್ಪರರ ವಿಶ್ವಾಸದಿಂದ ಎಲ್ಲ ರಾಷ್ಟ್ರಗಳು ಪ್ರಯತ್ನಿಸಿದರೆ ಮಾತ್ರ ಇದು ಸಾಧ್ಯ. ಅದ್ದರಿಂದ ಜಗತ್ತನ್ನು ಕೃತ್ರಿಮ ಗುಂಪುಗಳಾಗಿ ವಿಂಗಡಿಸುವದು ಅನುಚಿತವೆಂದು ಅವರು ಹೇಳಿದರು. ಅವರೀ ಅಭಿಪ್ರಾಯ ಮೇಲೆ ಹೇಳಿದಂತೆ ಅರ್ಥಗರ್ಭಿತವಾಗಿದೆ. ಜಗತ್ತಿನಲ್ಲಿ ಶಾಂತಿ ಸೌಹಾರ್ದ ಭಾವನೆ ಬೆಳೆಯಬೇಕಾದರೆ ಈ ಬಗೆಯ ವಿಚಾರಗಳು ಅವಶ್ಯ. ಅಮೇರಿಕೆಯ ಬರ್ನ್ಸರು ಮುಖ್ಯ ರಾಷ್ಟ್ರಗಳು ತಮ್ಮಲ್ಲಿಯ ಮತಭೇದಗಳನ್ನು ಬಗೆಹರಿಸಿಕೊಂಡು ಜಾಗತಿಕ ಶಾಂತಿಯನ್ನು ಪ್ರಸ್ಥಾಪಿಸಬೇಕಾಗಿದೆಂದು ಹೇಳಿದರು. ಯಾವ ಕಾರಣಗಳಿಗಾಗಿ ನಾವು ಯುದ್ಧವನ್ನು ಪ್ರಾರಂಭಿಸಿದೆವೊ ಅವುಗಳನ್ನು ಸಾಧಿಸುವದಕ್ಕಾಗಿ ಅವ್ಯಾಹತ ಹೆಣಗಬೇಕೆಂದು ರಶಿಯಾದ ಮೊಲೊಟೊವರು ನುಡಿದರು. ಯುದ್ಧಾನಂತರದ

— ೧೩ ನೇ ಪುಟಕ್ಕೆ

# ಮುಸ್ಲಿಂ ಲೀಗು ನಡುಗಾಲ ಸರಕಾರದಲ್ಲಿ ಸೇರಿತು

## ಆದರೆ ಕಾಂಗ್ರೆಸ್ಸಿನೊಡನೆ ಒಡಂಬಡಿಕೆಯಿಲ್ಲ
## ಲೀಗ ಪಾಲಿನಲ್ಲಿ ಹರಿಜನರಿಗೊಂದು ಸ್ಥಾನ

ಮುಸ್ಲಿಂಲೀಗಿನವರು ಕೇಂದ್ರ ಮಂತ್ರಿಮಂಡಲದಲ್ಲಿ ಸೇರಲು ನಿರ್ಧರಿಸಿ ತಮ್ಮ ಪಾಲಿನ ೫ ಸ್ಥಾನಗಳಿಗೆ ಹೆಸರುಗಳನ್ನು ಸೂಚಿಸಿದ್ದಾರೆಂದು ಹಿಂದುಸ್ತಾನ ಸರಕಾರದ ಹೇಳಿಕೆ ತಾ. ೧೫ ಕ್ಕೆ ಹೊರಟಿದೆ. ಅವರು ಸೂಚಿಸಿದ ಹೆಸರುಗಳನ್ನು ಒಪ್ಪಿ ಈ ಕೆಳಗಿನ ಸದಸ್ಯರನ್ನು ನಡುಗಾಲ ಸರಕಾರಕ್ಕೆ ಚಕ್ರವರ್ತಿಗಳು ನೇಮಿಸಿದ್ದಾರೆಂದೂ ಆ ಹೇಳಿಕೆ ಹೇಳುತ್ತದೆ :—

೧. ಜನಾಬ ಲಿಯಾಕತ ಅಲ್ಲಿಖಾನ
೨. ,, ಆಯ. ಆಯ. ಚುಂದಿ ಗಾರ
೩. ,, ಅಬ್ದುರ ರಬ ನಿಶ್ತಾರ
೪. ,, ಗಝನಫರ ಅಲ್ಲಿಖಾನ
೫. ಶ್ರೀ ಜೋಗೇಂದ್ರ ನಾಥ ಮಂಡಲ (ಹರಿಜನ)

ಮಂತ್ರಿ ಮಂಡಲದ ಪುನರ್ರಚನೆಯನ್ನು ಸಾಧ್ಯವಾಗಿ ಮಾಡಲು ಈ ಕೆಳಗಿನ ಸದಸ್ಯರು ರಾಜೀನಾಮೆ ಕೊಟ್ಟಿದ್ದಾರೆ:—

ಶ್ರೀ ಶರಚ್ಚಂದ್ರ ಬೋಸ
ಸರ್ ಶಫಾತ ಅಹಮದ ಖಾನ
ಜನಾಬ ಸಯ್ಯದ ಅಲ್ಲಿ ಜಹೀರ

ಸದ್ಯದ ಮಂತ್ರಿಮಂಡಲದ ಈ ಕೆಳಗಿನ ಸದಸ್ಯರು ಉಳಿಯುವರು:—

ಪಂಡಿತ ಜವಾಹರಲಾಲ ನೆಹರು
ಸರದಾರ ವಲ್ಲಭಭಾಯಿ ಪಟೇಲ
ಡಾ. ರಾಜೇಂದ್ರ ಪ್ರಸಾದ
ಮಿ. ಅಸಫ ಅಲ್ಲಿ
ಶ್ರೀ. ರಾಜಗೋಪಾಲಾಚಾರಿ
ಡಾ. ಜಾನ ಮಥಾಯಿ
ಸರದಾರ ಬಲದೇವ ಸಿಂಗ
ಶ್ರೀ ಜಗಜೀವನ ರಾಮು
ಶ್ರೀ ಕುವರಜೀ ಹೋರ್ಮುಸಜಿ ಭಾಭಾ

ಖಾತೆಗಳ ಹಂಚುವಳಿ ಬರುವ ವಾರ ಪ್ರಾರಂಭದಲ್ಲಿ ನಿರ್ಧರಿಸಲ್ಪಟ್ಟು ಅಗಲೆ ಹೊಸ ಸದಸ್ಯರ ಪ್ರತಿಜ್ಞಾವಿಧಿ ಜರಗುವದು. ಅವರಿಗೆ ರಾಜೀನಾಮೆ ಕೊಟ್ಟ ಸದಸ್ಯರೇ ಅವರವರ ಖಾತೆಗಳನ್ನು ಸಾಗಿಸಿಕೊಂಡು ಹೋಗಬೇಕೆಂದು ವಾಯಿಸರಾಯರು ಕೇಳಿಕೊಂಡಿದ್ದಾರೆ.

### ಸಂಧಾನ ಯಶಸ್ವಿಯಾಗಲಿಲ್ಲ

ಕಳೆದವಾರದ ಉತ್ತರಾರ್ಧದಲ್ಲಿ ಭಯಪಟ್ಟಂತೆ, ಭೋಪಾಲ ನವಾಬರ ಅವಿಶ್ರಾಂತ ಶ್ರಮವೆಲ್ಲ ವಿಫಲವಾಗಿ, ಕಾಂಗ್ರೆಸ್ ಲೀಗುಗಳಲ್ಲಿ ಮಂತ್ರಿಮಂಡಲ ರಚನೆಯ ವಿಷಯದಲ್ಲಿ ಒಡಂಬಡಿಕೆ ಅಸಾಧ್ಯವಾಯಿತು. ಭಿನ್ನಾಭಿಪ್ರಾಯದ ಮುಖ್ಯ ವಿಷಯಗಳು ಮುಸ್ಲಿಂ ಲೀಗು ಸಮಸ್ತ ಹಿಂದೀ ಮುಸ್ಲಿಮರ ಏಕಮಾತ್ರ ಪ್ರತಿನಿಧಿಯೆಂಬ ಲೀಗಿನ ಸಾಧನೆಗೆ ಸಂಬಂಧಪಟ್ಟವುಗಳೇ ಆಗಿವೆಯೆಂದು ಬೇರೆ ಹೇಳಬೇಕಾಗಿಲ್ಲ. ಈ ಮಾತುಕತೆಗಳು ಮುಂದೆ ಯಶಸ್ವಿಯಾಗಿ ಸಾಗಲಾರವೆಂದು ಖಚಿತವಾದ ಮೇಲೆ ಜಿನ್ನಾ ಸಾಹೇಬರು ವಾಯಿಸರಾಯರನ್ನು ಪುನಃ ಭೆಟ್ಟಿಯಾದರು. ಆ ಭೆಟ್ಟಿಯ ಪರಿಣಾಮವಾಗಿ ಮುಸ್ಲಿಂ ಲೀಗ್ ಕಾರ್‍ಯ ಸಮಿತಿ ಸಭೆ ಸೇರಿ "ತನ್ನ ಸ್ವಂತ ಹಕ್ಕಿನಿಂದ" ನಡುಗಾಲ ಸರಕಾರದಲ್ಲಿ ಸೇರಬೇಕೆಂದು ನಿರ್ಧರಿಸಿತು. ಆ ಪ್ರಕಾರ ಅದು ೫ ಹೆಸರುಗಳನ್ನು ವಾಯಿಸರಾಯರಿಗೆ ಸೂಚಿಸಿದ್ದರಿಂದ ಅವರು ಚಕ್ರವರ್ತಿಗಳ ಸಮ್ಮತಿಯಿಂದ ಮೇಲಿನ ಹೇಳಿಕೆಯನ್ನು ಹೊರಡಿಸಿದರು. ಆದರೆ ಮುಸ್ಲಿಂ ಲೀಗ್ ಕಾರ್‍ಯಸಮಿತಿ ಈ ಹೆಸರುಗಳನ್ನು ಸೂಚಿಸುವ ಪತ್ರದ ಒಕ್ಕಣೆಯನ್ನು ಮಾತ್ರ ಮನ್ನಿಸಿತು ಹೊರತು ಪ್ರತ್ಯೇಕ ಗೊತ್ತುವಳಿಯನ್ನು ಮಾಡಿ ನಡುಗಾಲ ಸರಕಾರದಲ್ಲಿ ಸೇರುವದಾಗಿ ಸಾರಲಿಲ್ಲ. ಈ ನಿರ್ಣಯಕ್ಕೆ ಅ. ಭಾ. ಲೀಗ ಕೌನ್ಸಿಲ್ಲಿನ ಔಪಚಾರಿಕ ಒಪಿಗೆ ಅವಶ್ಯವಿದೆ. ಮುಸ್ಲಿಂ ಲೀಗು ದೀರ್ಘಾವಧಿ ಯೋಜನೆಯಲ್ಲಿಯೂ ಭಾಗವಹಿಸುವ ನಿರ್ಣಯ ಮಾಡಬಹುದೆಂದು ಭಾವಿಸಲಾಗಿದೆ. ನಡುಗಾಲ ಸರಕಾರದಲ್ಲಿ, ಕಾಂಗ್ರೆಸ್ಸಿನೊಡನೆ ಒಡಂಬಡಿಕೆಯಾಗದಿದ್ದರೂ ಚಿಂತೆಯಿಲ್ಲ, ಸೇರಬೇಕೆಂಬ ಅಭಿಪ್ರಾಯಕ್ಕೆ ಲೀಗ ಕಾರ್‍ಯ ಸಮಿತಿಯನ್ನು ಒಲಿಸಬೇಕಾದರೆ ಜಿನ್ನಾ ಸಾಹೇಬರು ತುಂಬ ಕಷ್ಟಪಡಬೇಕಾಯಿತೆಂದು ಹೇಳಲಾಗುತ್ತಿದೆ.

### ಕೆಲವು ಆಶ್ಚರ್ಯಗಳು

ಮುಸ್ಲಿಂ ಲೀಗು ನಡುಗಾಲ ಸರಕಾರಕ್ಕೆ ಸೂಚಿಸಿದ ಮತ್ತು ಚಕ್ರವರ್ತಿಗಳು ಮಾನ್ಯ ಮಾಡಿದ ಹೆಸರುಗಳ ಯಾದಿಯಲ್ಲಿ ಒಂದಕ್ಕಿಂತ ಹೆಚ್ಚು ಆಶ್ಚರ್ಯಗಳಿವೆ. ಮೊದಲನೆಯದಾಗಿ ಕೇವಲ ಮುಸ್ಲಿಮರ ಸಂಬಂಧವಲ್ಲಷ್ಟೇ ಮಾತಾಡುವ ಧ್ಯೇಯವನ್ನಿಟ್ಟುಕೊಂಡಿದ್ದ ಲೀಗು ಜೋಗೇಂದ್ರ ನಾಥ ಮಂಡಲರ ಹೆಸರನ್ನೂ ಸೂಚಿಸಿದ್ದು ಆಶ್ಚರ್ಯಕರವೇ ಸರಿ. ಶ್ರೀ ಮಂಡಲರು ಬಂಗಾಲದ ಅಸ್ಪೃಶ್ಯ ಮುಂದಾಳುಗಳು ಅಂಬೇಡಕರರ ಅಸ್ಪೃಶ್ಯ ಮಹಾಮಂಡಲಕ್ಕೆ ಸೇರಿದವರು. ಜಿನ್ನಾರು ತಮ್ಮ ಪಾಲಿನ ಸ್ಥಾನಗಳಲ್ಲೊಂದನ್ನು ಹರಿಜನನೊಬ್ಬನಿಗೆ ಕೊಡುವರೆಂಬ ವದಂತಿ ಕೆಲ ದಿನಗಳಿಂದ ಹಬ್ಬಿದ್ದರೂ ಅದನ್ನು ನಂಬುವ ಧೈರ್ಯ ಯಾರಿಗೂ ಇದ್ದಿಲ್ಲ. ಶ್ರೀ ಮಂಡಲರನ್ನು ಸೇರಿಸಿಕೊಂಡು ಜಿನ್ನಾ ಸಾಹೇಬರು ಹಿಂದೂ ವರ್ಗದಲ್ಲಿ ಒಡಕನ್ನುಂಟುಮಾಡಿ, ಮುಸ್ಲಿಮನನ್ನು ಸೇರಿಸಿಕೊಳ್ಳುವ ಹಟವನ್ನು ಕೊನೆಗೂ ಬಿಡದಿದ್ದ ಕಾಂಗ್ರೆಸ್ಸಿನ ಮೇಲೆ ಸೇಡು ತೀರಿಸಿಕೊಂಡಿರುವರೇನೋ. ಮಂಡಲರ ಹೆಸರು ಕೊನೆಯ ಗಳಿಗೆಯಲ್ಲಿ ಸೇರಿಸಲ್ಪಟ್ಟಿತೆಂದೂ ಬ್ರಿಟಿಶ ಆಕಾಶವಾಣಿ ಹೆಸರುಗಳನ್ನು ಅಧಿಕೃತವಾಗಿ ಘೋಷಿಸಿದಾಗ ಅದು ನಾಜೀಮುದ್ದೀನರ ಹೆಸರನ್ನು ಸೂಚಿಸಿತ್ತೆಂದೂ ಬಲ್ಲವರು ಹೇಳುತ್ತಾರೆ. ಏನೇ ಇರಲಿ, ಜಿನ್ನಾರ ಈ ವ್ಯಾಪಾರದಿಂದ ಅಂಬೇಡಕರ ಪಕ್ಷದ ಆಯುಸ್ಸು ಸ್ವಲ್ಪ ಬೆಳೆಯಿತೆಂದೂ ಇದು ದೊಡ್ಡ ಧೂರ್ತ ಉಪಾಯವೆಂದೂ ಒಪ್ಪಲೇ ಬೇಕು. ಅದರ ಹಿಂದಿರುವ ಉದ್ದೇಶವೇನೇ ಇರಲಿ, ಲೀಗು ಹೊದ್ದಿರುವ ಜಾತೀಯತೆಯ ಅಂಗಿಗಳಲ್ಲಿ ಒಂದನ್ನು ಅದು ಕಳಚಿ ಒಗೆದಂತಾಗಿದೆ. ಅಷ್ಟು ಮಟ್ಟಿಗೆ ಅದು ರಾಷ್ಟ್ರೀಯತೆಯ ದಾರಿಯಲ್ಲಿ ಮುಂದುವರಿದಿದೆ. ಮುಸ್ಲಿಮರು ಮಾತ್ರವೇ ಪಾಕಿಸ್ತಾನವನ್ನು ಆಳುವರೆಂಬ ಮಾತು ಲೀಗ್ ಮುಂದಾಳುಗಳಿಗೆ ಮನವರಿಕೆಯಾಗಿದೆಯೇನೊ? ಬಂಗಾಲದಲ್ಲಿ ಕೇವಲ ನಾಮಮಾತ್ರ ಬಹುಮತದಲ್ಲಿರುವ ಮುಸ್ಲಿಮರ ಮುಂಗೈ ಕಸುವನ್ನು ಹೆಚ್ಚಿಸಿಕೊಳ್ಳಲು ಇಕ್ಕಿದಗಾಳವೋ ಏನೋ ಇದು. ಲೀಗ್ ಹೆಸರುಗಳಲ್ಲಿ ಈಗ ಬಂಗಾಲ ಹಾಗು ಸಿಂಧ ಮುಸ್ಲಿಮರಿಗೆ ಸ್ಥಾನವಿಲ್ಲದ್ದು ಇನ್ನೊಂದು ವಿಚಿತ್ರ. ಅವರ ಬೆಂಬಲದ ಭರವಸೆ ಜಿನ್ನಾರಿಗೆ ಪರಿಪೂರ್ಣವಾಗಿರಬಹುದು. ಇನ್ನು ಶರಚ್ಚಂದ್ರ ಬೋಸರ ರಾಜೀನಾಮೆಯಾದರೂ ತುಸು ಅನಿರೀಕ್ಷಿತವೇ ಆಗಿದೆ. ರಾಜೀನಾಮೆಯಿತ್ತ ಇನ್ನಿಬ್ಬರಾದ ಸಯ್ಯದ ಅಲ್ಲಿ ಝಹೀರ ಮತ್ತು ಸರ್ ಶಫಾತ ಅಹಮ್ಮದರನ್ನು ವಿದೇಶಗಳಲ್ಲಿ ರಾಯಭಾರಿಗಳಾಗಿ ನೇಮಿಸಲಾಗುವದೆಂದು ನಂಬಲಾಗಿದೆ.

### ಸಂಯುಕ್ತ ಹೊಣೆಗೆ ಒಪ್ಪಿಗೆ?

ಕೇಂದ್ರ ಮಂತ್ರಿಮಂಡಲದ ಸಂಯುಕ್ತ ಹೊಣೆ, ಎಂದರೆ ಮಂತ್ರಿಮಂಡಲದ ನಿರ್ಣಯಗಳಿಗೆ ಸದಸ್ಯರೆಲ್ಲರೂ ಹೊಣೆಗಾರರಾಗುವ ವಿಧಿ. ಜಿನ್ನಾರಿಗೆ ಅಷ್ಟು ಪ್ರಿಯವಾದ ವಸ್ತುವಲ್ಲ. ಹೀಗಾದರೆ ಅಲ್ಪ ಸಂಖ್ಯಾಕರರಾದ ತಮ್ಮನ್ನು ಬದಿಗೊತ್ತಿ ಮಂತ್ರಿ ಮಂಡಲ ನಿರ್ಣಯ ಮಾಡಬಹುದೆಂದೂ ಆಗ ತಾವು ವಾಯಿಸರಾಯರ ಹಸ್ತಕ್ಷೇಪವನ್ನು ಬೇಡುವದು ಸಾಧ್ಯವಾಗಲಿಕ್ಕಿಲ್ಲವೆಂದೂ ಅವರು ಭಯಪಡುತ್ತಿದ್ದರು. ಆದರೆ ವಾಯಿಸರಾಯರ ಪ್ರಕಟನೆಯ ಶಬ್ದಗಳನ್ನು ಓದಿ, ಜಿನ್ನಾರು ಸಂಯುಕ್ತ ಹೊಣೆಯ ತತ್ವಕ್ಕೆ ಒಪ್ಪಿಕೊಂಡಿದ್ದಾರೆಂದು ಕೆಲವರು ಊಹಿಸತೊಡಗಿದ್ದಾರೆ. "ಕಾರ್‍ಯಕಾರಿ ಮಂಡಲ" ಎಂದು ಹೇಳುವ ಬದಲು ಆ ಪ್ರಕಟನೆಯಲ್ಲಿ "ಮಂತ್ರಿ ಮಂಡಲ" ಎಂದು ಉಲ್ಲೇಖಿಸಲ್ಪಟ್ಟಿರುವದರಿಂದ ನೆಹರು ಅವರು ಸ್ಥಾಪಿಸಿದ ಪರಂಪರೆಗೆ ಜಿನ್ನಾ ಸಾಹೇಬರು ಹೂಂಗುಟ್ಟಿರಬಹುದು. ಇದು ನಿಜವಾಗಿದ್ದರೆ, ಅಂದರೆ, ವಾಯಿಸರಾಯರ ಹಸ್ತಕ್ಷೇಪವನ್ನು ಅಪೇಕ್ಷಿಸದೆ ತಮ್ಮ ಸ್ವಂತ ಮುಂಗೈ ಕಸುವು ಮತ್ತು ತಮ್ಮ ವಾದದ ನ್ಯಾಯತೆಯಿಂದ ಮಂತ್ರಿ ಮಂಡಲದ ಇತರ ಸದಸ್ಯರನ್ನು ತಿರುಗಿಸಿಕೊಳ್ಳುವ ಧೈರ್ಯ ಲೀಗಿಗೆ ಬಂದಿದೆಯೆಂದು ಅರ್ಥವಾಗುತ್ತದೆ. ಹೀಗಾದರೆ ಮಂತ್ರಿ ಮಂಡಲ, ಕಾಂಗ್ರೆಸ್—ಲೀಗ್ ಒಪ್ಪಂದವಿಲ್ಲದಿದ್ದರೂ ವಾಯಿಸರಾಯರನ್ನು ನಂಬದೆ ಮತ್ತು ಅವರಿಗೆ ಬಾಗದೆ, ಸ್ವತಂತ್ರವಾಗಿ ಸಾಗಬಲ್ಲದು. ಆದರೆ ಲೀಗು ತನ್ನ ಯಾವುದೊಂದು ಕರಾರೂ ಸ್ವೀಕೃತವಾಗದಿದ್ದಾಗ್ಯೂ ಮಂತ್ರಿ ಮಂಡಲದಲ್ಲಿ ಸೇರುವ ನಿರ್ಣಯ ಮಾಡಿದ್ದರಲ್ಲಿ ವಾಯಿಸರಾಯರ ಕೈವಾಡವುಂಟೆಂದೂ ಲೀಗ ಸದಸ್ಯರು ನೆಹರೂ ಮಂತ್ರಿ ಮಂಡಲದ ಅಂತಸ್ತನ್ನು ತಗ್ಗಿಸುವ ಸಲುವಾಗಿಯೇ ಮತ್ತು ಪದೇ ಪದೇ ವಾಯಿಸರಾಯರ ಮುಖನೋಡುವಂತೆ ಮಾಡುವ ಸಲುವಾಗಿಯೇ ಸೇರಿಸಿಕೊಳ್ಳಲ್ಪಟ್ಟಿರುವರೆಂದೂ ನಂಬುವವರೂ ಇದ್ದಾರೆ. ಅದರೂ ಹೇಗೆ ಆಗಲಿ, ಲೀಗು ೫ ಸ್ಥಳಗಳನ್ನು ಸ್ವೀಕರಿಸಿ ಒಳಬಂದುದರಿಂದ ಕಾಂಗ್ರೆಸ್ಸಿಗರು ಸಂತುಷ್ಟರಾಗಿರುವರೆಂದು ಹೇಳಲಾಗಿದೆ.

### ಪತ್ರವ್ಯವಹಾರ

ನೆಹರೂ ಜಿನ್ನಾ ಮಾತುಕತೆಗಳ ಸಂಬಂಧದಲ್ಲಿ ಅವರೊಳಗೆ ನಡೆದ ಪತ್ರವ್ಯವಹಾರವನ್ನು ಪ್ರಸಿದ್ಧಗೊಳಿಸಲು ಜಿನ್ನಾ ಸಾಹೇಬರು ಒತ್ತಾಯ ಮಾಡಿದ್ದರಿಂದ ಅದೀಗ ಪ್ರಸಿದ್ಧಿಸಲ್ಪಟ್ಟಿದೆ. ಈ ಪತ್ರವ್ಯವಹಾರದಲ್ಲಿ ತಾವು ಮಹಾತ್ಮಾ ಗಾಂಧಿಯವರನ್ನು ಪೇಚಿನಲ್ಲಿ ಕೆಡವಿ ಅವರ ಮಾತನ್ನು ಅವರ ಕೊರಳಿಗೆ ಗಂಟಿಕ್ಕಿದ್ದೇವೆಂದು ಜಿನ್ನಾರು ಬಗೆದಿದ್ದಾರಂತೆ. "ಮುಸ್ಲಿಂ ಲೀಗು ಈಗ ಹಿಂದುಸ್ತಾನದ ಮುಸಲ್ಮಾನರಲ್ಲಿ ಪ್ರಚಂಡ ಬಹುಸಂಖ್ಯಾಕರ ಅಧಿಕೃತ ಪ್ರಾತಿನಿಧಿಕ ಸಂಸ್ಥೆಯಾಗಿರುವದೆಂದು……ಹಿಂದುಸ್ತಾನದ ಮುಸಲ್ಮಾನರ ಪ್ರಾತಿನಿಧ್ಯ ವಹಿಸಲು ಅವರಿಗಷ್ಟೇ ನಿಸ್ಸಂದೇಹವಾದ ಹಕ್ಕುಂಟು…" ಎಂಬದಾಗಿ ಗಾಂಧೀಜಿಯವರು ಸಹಿಸಿ ಒಪ್ಪಿಕೊಂಡ ಸೂತ್ರದ ಆಧಾರದ ಮೇಲೆಯೆ ನೆಹರೂ—ಜಿನ್ನಾ ಭೆಟ್ಟಿಯ ವ್ಯವಸ್ಥೆಯಾಯಿತೆಂ ೲ ಆದರೆ ಮುಂದೆ ನೆಹರೂ ಮತ್ತು ಅವರ ಸಂಗಡಿಗರು ಈ ಯೋಜನೆಯನ್ನೊಪ್ಪದೆ ಅದರಲ್ಲಿ ಬದಲಾವಣೆ ಮಾಡ ಬಯಸಿದರೆಂದೂ ಇದೇ ಮೂಲವಾಗಿ ಮಾತುಕತೆ ಮುರಿಯಿತೆಂದೂ ಜಿನ್ನಾ ಸಾಹೇಬರ ವಾದವಿದೆ. ಕೆಲ ದಿನಗಳ ಹಿಂದೆ ಗಾಂಧೀಜಿಯವರು ತಾವೊಂದು ದೊಡ್ಡ ಪ್ರಮಾದ ಮಾಡಿರುವದಾಗಿ ಪ್ರಾರ್ಥನಾ ಸಭೆಯಲ್ಲಿ ಹೇಳಿದ್ದು ಈ ಸೂತ್ರಕ್ಕೆ ತಾವು ಸಹಿ ಹಾಕಿದ ಸಂಬಂಧದಲ್ಲಿಯೇ ಇರಬೇಕೆಂದು ಊಹಿಸಲಾಗಿದೆ. ಆದರೆ ಇದೇ ಸೂತ್ರದ ಎರಡನೆ ಖಂಡದಲ್ಲಿ "ನಡುಗಾಲ ಸರಕಾರದ ಎಲ್ಲ ಮಂತ್ರಿಗಳು ಇಡಿ ಹಿಂದುಸ್ತಾನದ ಹಿತಕ್ಕಾಗಿ ಒಂದೇ ಗಣದಂತೆ ಕೆಲಸಮಾಡುವದಲ್ಲದೆ ಎಂದೂ ಗವರ್ನರ ಜನರಲ್ಲರ ಹಸ್ತಕ್ಷೇಪವನ್ನು ಬಯಸುವದಿಲ್ಲ" ಎಂಬ ಕರಾರು ಹಾಕಲ್ಪಟ್ಟಿತ್ತೆಂದು ಪಂಡಿತ ಜವಾಹರರು ಹೇಳುತ್ತಾರೆ. ಜಿನ್ನಾ ಸಾಹೇಬರು ಈ ಭಾಗಕ್ಕೆ ಒಪ್ಪದೆ, ಅದು ಸೂತ್ರದ ಅಂಗವಾಗಿದ್ದಿಲ್ಲ, ಮಾತುಕತೆಯಿಂದ ಬಗೆಹರಿಸಬೇಕಾದ ಪ್ರಶ್ನೆ ಮಾತ್ರ ಆಗಿತ್ತೆಂದು ವಾದಿಸುತ್ತಾರೆ. ಇದಲ್ಲದೆ ಗಾಂಧೀಜಿಯವರು ಸಹಿ ಹಾಕಿದ ಸೂತ್ರದ ಉದ್ದೇಶ ಎಷ್ಟೇ ಸಾಧುವಾಗಿದ್ದರೂ ಅದರ ಶಬ್ದ ಪ್ರಯೋಗ ಅಷ್ಟು ಉಚಿತವಾಗಿದ್ದಲ್ಲವೆಂದೂ ಅದನ್ನು ಸ್ವಲ್ಪ ಬದಲಾಯಿಸಬೇಕೆಂದೂ ಜವಾಹರರು ಬಯಸಿದ್ದರು.

### ೯ ಮುದ್ದೆಗಳು

ಜಿನ್ನಾ—ಜವಾಹರರ ಚರ್ಚೆಯಲ್ಲಿ ೯ ಮುದ್ದೆಗಳು ಉಪಸ್ಥಿತವಾಗಿದ್ದವೆಂದು ಜಿನ್ನಾ ಸಾಹೇಬರು ಹೇಳುತ್ತಾರೆ.

೧ ಕಾರ್‍ಯಕಾರಿ ಮಂಡಲದ ಸದಸ್ಯರ ಸಂಖ್ಯೆ ೧೪ ಇರಬೇಕು- ( ಇದರಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ. )

೨. ಕಾಂಗ್ರೆಸ್ಸಿನ ೬ ಸದಸ್ಯರಲ್ಲಿ ಒಬ್ಬ ಹರಿಜನನಿರಬೇಕಾದ್ದು ಆದರೆ ಆರಿಸಲ್ಪಟ್ಟ ಹರಿಜನನಿಗೆ ಮುಸ್ಲಿಂ ಲೀಗು ಒಪ್ಪಿದೆಯೆಂದು ಅರ್ಥವಲ್ಲ. ಅದರ ಅಂತಿಮ ಹೊಣೆ ವಾಯಿಸರಾಯರದು. (ಈ ಪ್ರಶ್ನೆಯಲ್ಲಿ ಲೀಗಿನ ಸಂಬಂಧವೇ ಇಲ್ಲೆಂದು ಕಾಂಗ್ರೆಸ್ಸು ಭಾವಿಸಿದೆ.)

೩. ಕಾಂಗ್ರೆಸ್ಸು ತನ್ನ ಪಾಲಿನ ಉಳಿದ ಐವರಲ್ಲಿ ಮುಸ್ಲಿಮನನ್ನು ಸೇರಿಸತಕ್ಕದ್ದಲ್ಲ. (ಲೀಗು ಸದ್ಯಕ್ಕೆ ಮುಸ್ಲಿಮರ ಅಧಿಕೃತ ಸಂಸ್ಥೆಯೆಂದೊಪ್ಪಿದರೂ ಕಾಂಗ್ರೆಸಿನೊಡನೆ ಸುಖ ಕಷ್ಟಗಳಲ್ಲಿ ಪಾಲುಗಾರರಾದ ರಾಷ್ಟ್ರೀಯ ಮುಸ್ಲಿಮರ ಮತ್ತು ಎಲ್ಲ ಮುಸ್ಲಿಮೇತರರ ಪ್ರತಿನಿಧಿ ಕಾಂಗ್ರೆಸ್ಸೆಂದು ಲೀಗು ಒಪ್ಪಿಕೊಳ್ಳತಕ್ಕದೆಂದು ಕಾಂಗ್ರೆಸ್ಸಿನ ವಾದ. )

೪ ಅಲ್ಪಸಂಖ್ಯಾಕರ ಹಿತರಕ್ಷಣೆ — ಮಹತ್ವದ ಜಾತೀಯ ಮುದ್ದೆಯಲ್ಲಿ ಉಭಯ ಜಾತಿಗಳಲ್ಲೊಂದರ ಬಹುಮತದ ವಿರೋಧವಿದ್ದರೆ ನಿರ್ಣಯ ಕೈಕೊಳ್ಳತಕ್ಕದ್ದಲ್ಲ. (ಜಾತೀಯ ಮುದ್ದೆಗಳಾವುವೆಂಬ ನಿರ್ಣಯವನ್ನು ನ್ಯಾಯಸ್ಥಾನದಲ್ಲಿ ಮಾಡಬೇಕೆಂಬ ಜಿನ್ನಾರ ಅಭಿಪ್ರಾಯ ಕಾಂಗ್ರೆಸ್ಸಿಗೆ ಅಸಮ್ಮತವಾಗಿತ್ತು. ಮಧ್ಯಸ್ಥರಿಗೊಪ್ಪಿಸಬೇಕೆಂದು ಅದರ ಅಭಿಪ್ರಾಯ.)

೫ ಎರಡೂ ಪಂಗಡಗಳಿಂದ ಮಂತ್ರಿಮಂಡಲದ ಉಪಾಧ್ಯಕ್ಷರನ್ನು ಪಾಳಿಯಮೇಲೆ ಆರಿಸಬೇಕು. (ಇದರ ಬದಲು ಮಂತ್ರಿ ಮಂಡಲದ ಉಪಾಧ್ಯಕ್ಷ ಕಾಂಗ್ರೆಸ್ಸಿಗನಿದ್ದರೆ ಶಾಸನ ಸಭೆಯ ಮುಂದಾಳು ಲೀಗ ಸದಸ್ಯನಿರಬೇಕೆಂಬುದಕ್ಕೆ ಕಾಂಗ್ರೆಸ್ಸು ಒಪ್ಪಿತ್ತು. )

(೬) ಸೀಖ, ಹಿಂದೀ ಕ್ರಿಶ್ಚನ್ ಮತ್ತು ಪಾರ್ಸಿ ಮಂತ್ರಿಗಳನ್ನಾರಿಸುವಾಗ ಲೀಗನ್ನು ಕೇಳಿಲ್ಲವಾಗಿ ಇನ್ನು ಮೇಲೆ ಆ ಸ್ಥಾನಗಳು ತೆರವಾದಾಗ ಉಭಯ ಪಕ್ಷಗಳ ಒಪಿಗೆಯಿದ್ದವರನ್ನೆ ಆರಿಸಬೇಕು. (ಈ ವಿಷಯದಲ್ಲಿ ಇಡೀ ಮಂತ್ರಿಮಂಡಲ ವಿಚಾರ ವಿನಿಮಯ ಮಾಡಿ ವಾಯಿಸರಾಯರಿಗೆ ಸಲಹೆ ಕೊಡಬೇಕೆಂದೂ ಇದರಲ್ಲಿ ಲೀಗಿನ ಹಕ್ಕಿನ ಪ್ರಶ್ನೆಯಿಲ್ಲೆಂದೂ ಕಾಂಗ್ರೆಸ್ಸು ಹೇಳಿತು.)

(೭) ಮುಖ್ಯ ಖಾತೆಗಳು ಎರಡೂ ಪಕ್ಷಗಳಲ್ಲಿ ಸರಿಯಾಗಿ ಹಂಚಲ್ಪಡಬೇಕು ( ಈ ಪ್ರಶ್ನೆ ಚರ್ಚಿಸಲ್ಪಟ್ಟಿತ್ತು ಮಾತ್ರ)

(೮) ಎರಡೂ ಮುಖ್ಯ ಪಕ್ಷಗಳು ಒಪ್ಪಿದಲ್ಲದೆ ಈ ವ್ಯವಸ್ಥೆಯಲ್ಲಿ ಬದಲಾವಣೆ ಆಗತಕ್ಕದ್ದಲ್ಲ.

(೯) ಮೇಲಿನ ಮುದ್ದೆಗಳ ಮೇಲೆ ಒಡಂಬಡಿಕೆಯಾಗುವ ವರೆಗೆ ದೀರ್ಘಾವಧಿ ಯೋಜನೆಯ ಪ್ರಶ್ನೆ ಹಾಗೆಯೆ ಇರತಕ್ಕದ್ದು.

—೧೩ನೇ ಪುಟಕ್ಕೆ

—೧೩ನೇ ಪುಟಕ್ಕೆ



### ಶಾಂತಿ ಪರಿಷತ್ತಿನ ಮುಕ್ತಾಯ

ಎರಡೂವರೆ ತಿಂಗಳಿನ ಅಷ್ಟು ಸೌಹಾರ್ದಮಯವಲ್ಲದ ಸಂಧಾನದ ನಂತರ ಪ್ಯಾರೀಸಿನ ಶಾಂತಿ ಪರಿಷತ್ತು ತಾ. ೧೫ ಕ್ಕೆ ಕೊನೆಗಂಡಿತು. ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ನಾಳೆ ತಾ. ೨೩ ಕ್ಕೆ ನ್ಯೂಯಾರ್ಕಿನಲ್ಲಿ ಸೇರಲಿರುವ ಯುಕ್ತರಾಷ್ಟ್ರ ಸಂಘದ ಸಭೆಗೆ ಅನುಕೂಲವಾಗುವಂತೆ ಸಭೆ ಮುಕ್ತಾಯಗೊಂಡದ್ದೊಂದು ದೊಡ್ಡ ಯಶಸ್ಸೆಂದೇ ಹೇಳಬೇಕು. ಇನ್ನು ವಿದೇಶಮಂತ್ರಿಗಳ ಸಭೆಯವರು ಶಾಂತಿ ಪರಿಷತ್ತಿನ ನಿರ್ಣಯಗಳು ತೋರಿಸಿದ ದಾರಿಯಲ್ಲಿ ಭೂತಪೂರ್ವ ಶತ್ರುರಾಷ್ಟ್ರಗಳಿಗೆ ಒಪ್ಪಿಸಲ್ಪಡುವ ಶಾಂತಿ ಕರಾರುಗಳ ಕೊನೆಯ ಲಿಖಿತವನ್ನು ಸಿದ್ಧಗೊಳಿಸುವದೊಂದು ಉಳಿದಿದೆ. ಈಗಾಗಲೆ ಚತುರ್ರಾಷ್ಟ್ರ ವಿದೇಶಮಂತ್ರಿಗಳು ಇದಕ್ಕಾಗಿ ಕಾರ್‍ಯಕ್ರಮದ ಚರ್ಚೆಯನ್ನು ನಡೆಸಿರುವರು.

ಇಷ್ಟು ಮಟ್ಟಿಗೆ ಅದುದೆಲ್ಲ ಒಳಿತೇ ಆಯಿತು. ಆದರೆ ಕೊನೆಯ ವರೆಗೂ ಸೋವಿಯಟ್ ಗುಂಪು ಅತೃಪ್ತಿಯಲ್ಲಿಯೇ ಇತ್ತು. ಪರಿಷತ್ತಿನ ಕೊನೆಯ ದಿನದ ಮಹಾ ಸಭೆಗೆ ಬಾರದೆ ಹೊರಗುಳಿದು ಯುಗೊಸ್ಲಾವ ಪ್ರತಿನಿಧಿ ಮಂಡಲ ತನ್ನ ಪ್ರತಿಭಟನೆಯನ್ನು ತೋರಿತು. ಶಾಂತಿ ಒಡಂಬಡಿಕೆಗಳ ಯುಗೊಸ್ಲಾವಿಯಾಕ್ಕೆ ಸಂಬಂಧಿಸಿದ ಕಲಮುಗಳು ಈಗಿನ ಸ್ವರೂಪದಲ್ಲಿ ಉಳಿದರೆ ತಾನು ಶಾಂತಿ ಒಡಂಬಡಿಕೆಗೆ ಅಂಕಿತ ಹಾಕುವಂತಿಲ್ಲವೆಂದು ಯುಗೊಸ್ಲಾವಿಯಾ ಸ್ಪಷ್ಟವಾಗಿ ಬರೆದು ಕಳಿಸಿತ್ತು.

ಸೋವಿಯಟ್ ಗುಂಪಿಗೆ ಮನವೊಪ್ಪದ ಮುಖ್ಯ ಸಂಗತಿಗಳು ಇವು:

೧) ಟ್ರೀಸ್ಟಿಯ ಅಂತರ್ ರಾಷ್ಟ್ರೀಕರಣದ ಬಗ್ಗೆ ಪರಿಷತ್ತು ಅಂಗೀಕರಿಸಿದ ಗೊತ್ತುವಳಿ.

೨) ಡ್ಯಾನ್ಯೂಬ ನದಿಯಲ್ಲಿ ನೌಕಾ ಪ್ರವೇಶಕ್ಕೆ ಸರ್ವರಾಷ್ಟ್ರಗಳಿಗೂ ಹಕ್ಕಿರಬೇಕೆಂಬುದು ಫ್ರೆಂಚರು ಸೂಚಿಸಿದ ಮಧ್ಯಮಾರ್ಗದ ಗೊತ್ತುವಳಿಯ ಸ್ವೀಕಾರ.

೩) ಗ್ರೀಸ—ಬಲ್ಗೇರಿಯಾ ಗಡಿ ಮೊದಲಿದ್ದಂತೆ ಇರಬೇಕೆಂಬ ವಿದೇಶಮಂತ್ರಿ ಸೂಚನೆಯನ್ನು ಪರಿಷತ್ತು ನಿರಾಕರಿಸಿದ್ದು.

ರಶಿಯನ್ ವಿದೇಶಮಂತ್ರಿ ಮೊಲಟೋವರು ತಾ. ೧೪ ಕ್ಕೆ ಮಾಡಿದ ೪೫ ನಿಮಿಷಗಳ ಭಾಷಣದಲ್ಲಿ ಅಂಗ್ಲೊ-ಅಮೇರಿಕನ್ನರ ಮೇಲೆ ಗುಂಪುಕಟ್ಟಿಕೊಂಡು ತಮ್ಮ ಇಚ್ಛೆಯನ್ನು ಉಳಿದವರ ಮೇಲೆ ಹೇರಬೇಕೆಂದು ಪ್ರಯತ್ನಿಸಿದರೆಂಬ ಆರೋಪವನ್ನು ಹೊರಿಸಿದರು. ಹಿಂದುಸ್ತಾನದ ಸ್ವತಂತ್ರ ವಾಣಿ ಕೇಳಬರುತ್ತಿದ್ದರೆ ಅದು ಡ್ಯಾನ್ಯೂಬ ಪ್ರಶ್ನೆಯಲ್ಲಿ ಈಗಿನಂತೆ ಪಕ್ಷಪಾತದ ನಿಲುವೆಯನ್ನು ವಹಿಸುತ್ತಿದ್ದಿಲ್ಲವೆಂದು ಹೇಳಿ ಅವರು ಹಿಂದೀ ಪ್ರತಿನಿಧಿಗಳು ಬ್ರಿಟಿಶ ಕೈಗೊಂಬೆಗಳಾಗಿದ್ದರೆಂದು ಪರ್‍ಯಾಯವಾಗಿ ಅಪಾದಿಸಿದರು. ವಿದೇಶಮಂತ್ರಿಗಳ ಸಭೆಯಲ್ಲಿ ಒಪ್ಪಿಕೊಂಡ ವಿಷಯಗಳನ್ನು ಪರಿಷತ್ತಿನಲ್ಲಿ ವಿರೋಧಿಸಿ ಅಂಗ್ಲೊ-ಅಮೇರಿಕನ್-ಫ್ರೆಂಚರು ಕೊಟ್ಟ ಮಾತು ಮುರಿದರೆಂದೂ ಅವರು ಆಕ್ಷೇಪಿಸಿದರು.

ಈ ಭಾಷಣವನ್ನು ನೋಡಿದರೆ ವಿದೇಶ ಮಂತ್ರಿಗಳ ಸಭೆಯಲ್ಲಾದರೂ ಸರಾಗವಾಗಿ ಒಡಂಬಡಿಕೆಗಳು ಸಿದ್ಧವಾಗುವವೆಂಬ ಆಶೆ ದೂರವಾಗಿರುವಂತೆ ತೋರುತ್ತದೆ.

### ಶಾಂತಿ ಒಡಂಬಡಿಕೆಗಳು

ಭೂತಪೂರ್ವ ಶತ್ರುರಾಷ್ಟ್ರಗಳಿಗೆ ಒಪ್ಪಿಸಲ್ಪಡುವ ೫ ಒಡಂಬಡಿಕೆಗಳ ಕರಡುಗಳು ಒಂದೇ ತತ್ವವನ್ನಾಧರಿಸಿ ಸಿದ್ಧಗೊಳಿಸಲ್ಪಟ್ಟಿವೆ. ಇಟಲಿ, ರುಮಾನಿಯಾ, ಬಲ್ಗೇರಿಯಾ, ಹಂಗೆರಿ ಮತ್ತು ಫಿನ್ಲಂಡು ಈ ಒಡಂಬಡಿಕೆಗಳಿಗೆ ಸಹಿಮಾಡಬೇಕು.

ಭಾವಿ ಆಕ್ರಮಣವನ್ನು ತಡೆಯುವದು, ಯುರೋಪಿನ ಆರ್ಥಿಕ ಪುನರ್ಘಟನೆ ಮತ್ತು ಆ ರಾಷ್ಟ್ರಗಳಲ್ಲಿ ಮಾನವ ಹಕ್ಕುಗಳ ಮತ್ತು ಪ್ರಜಾತಂತ್ರದ ತತ್ವಗಳನ್ನು ಪ್ರತಿಷ್ಠಾಪಿಸುವದು—ಇವೇ ಆ ತತ್ವಗಳು.

# ಅಂತರ್ ರಾಷ್ಟ್ರೀಯ

ಒಡಂಬಡಿಕೆಯ ಕರಾರುಗಳೆಲ್ಲ ಸರಿಯಾಗಿ ಪಾಲಿಸಲ್ಪಟ್ಟ ಮೇಲೆ ಈ ಐದು ಹಿಂದಿನ ಶತ್ರುರಾಷ್ಟ್ರಗಳು ಯುಕ್ತ ರಾಷ್ಟ್ರ ಸದಸ್ಯತ್ವಕ್ಕೆ ಅರ್ಹವಾಗುವವು.

ಒಡಂಬಡಿಕೆಗೆ ಸಹಿ ಹಾಕಿದ ೯೦ ದಿನಗಳಲ್ಲಿ ಆ ರಾಷ್ಟ್ರಗಳಲ್ಲಿಟ್ಟ ಸೈನ್ಯವನ್ನು ಮಿತ್ರರು ಹಿಂತೆಗೆದುಕೊಳ್ಳುವರು. ಆದರೆ ರುಮೇನಿಯಾ, ಹಂಗೆರಿಗಳಲ್ಲಿ ಮಾತ್ರ ಆಸ್ಟ್ರಿಯಾದೊಡನೆ ಸಂಪರ್ಕ ಇಟ್ಟುಕೊಳ್ಳಲು ಅವಶ್ಯವಿರುವಷ್ಟು ಸೈನ್ಯವನ್ನು ರಶಿಯನ್ನರು ಇಟ್ಟುಕೊಳ್ಳಬಹುದು.

ಪ್ರಾದೇಶಿಕ ಬದಲಾವಣೆಗಳು ಇಂತಿವೆ:

ಈ ಒಡಂಬಡಿಕೆಗನ್ವಯ ಆದ ಪ್ರಾದೇಶಿಕ ಬದಲಾವಣೆಗಳು ಅತ್ಯಲ್ಪವಾಗಿವೆ. ಇಟಲಿಯೇ ಎಲ್ಲರಿಗಿಂತ ಹೆಚ್ಚು ಕಳೆದುಕೊಳ್ಳುವದು; ಅದು ತನ್ನ ಎಲ್ಲ ವಸಾಹತುಗಳನ್ನೂ ೧೯೧೪-೧೮ ರ ಯುದ್ಧದಲ್ಲಿ ಆಸ್ಟ್ರಿಯಾದಿಂದ ಕಸಿದು ಕೊಂಡಿದ್ದ ಟ್ರೀಸ್ಟಬಂದರ ಹಾಗು ಸುತ್ತಲು ಪ್ರದೇಶವನ್ನೂ ಫ್ರೆಂಚ ಗಡಿಯಲ್ಲಿ ಮತ್ತು ಯುಗೊಸ್ಲಾವಿಯಾ ಗಡಿಯಲ್ಲಿ ತಾನು ಭಾಗವನ್ನೂ ಡೊಡೆಕನೀಸ ದ್ವೀಪಗಳನ್ನೂ (ಗ್ರೀಸಿಗೆ ಸೇರುವದು) ಕಳೆದುಕೊಳ್ಳುವದು. ಅದು ಚೀನದಲ್ಲಿದ್ದ ಹಕ್ಕುಗಳನ್ನೂ ಬಿಟ್ಟುಕೊಡುವದು.

ಈಗಾಗಲೆ (೧೯೪೦ರಲ್ಲಿ) ರುಮೇನಿಯಾ ರಶಿಯಾಕ್ಕೆ ಕೊಟ್ಟ ಬೆಸರೇಬಿಯಾ ರಶಿಯಾಕ್ಕೆ ಸೇರುವದು. ದಕ್ಷಿಣ ದೊಬ್ರೂಜನ್ನು ಬಲ್ಗೇರಿಯಾಕ್ಕೆ ಕೊಡುವದು. ಆದರೆ ಹಿಟ್ಲರನು ಹಂಗೆರಿಗೆ ಕೊಟ್ಟಿದ್ದ ಉತ್ತರ ಟ್ರಾನ್ಸಿಲ್ವೇನಿಯಾ ರುಮೇನಿಯಾಕ್ಕೆ ತಿರುಗಿ ದೊರೆಯುವದು.

ಗ್ರೀಕ-ಬಲ್ಗೇರಿಯನ್ ಗಡಿ ಪ್ರಶ್ನೆಯನ್ನು ವಿದೇಶ ಮಂತ್ರಿ ಸಭೆಗೆ ಬಿಟ್ಟು ಕೊಡಲಾಗಿದೆ. ಮೊದಲು ಈ ಗಡಿ ಇದ್ದಂತಿರಬೇಕೆಂದು ಸೂಚಿಸಲ್ಪಟ್ಟಿತ್ತು.

ಟ್ರಾನ್ಸಿಲ್ವೇನಿಯಾವನ್ನು ಹಂಗೆರಿ ರುಮೇನಿಯಾಕ್ಕೆ ಕೊಡುವದಲ್ಲದೆ, ಝೆಕೊಸ್ಲೊವಾಕಿಯಾಕ್ಕೆ ಡ್ಯಾನ್ಯೂಬದ ದಕ್ಷಿಣ ತೀರದ ಸ್ವಲ್ಪ ಭಾಗವನ್ನು ಕೊಡುವದು.

ಫಿನ್ಲಂಡು ರಶಿಯಾಕ್ಕೆ ಪೆಟ್ಸಾಮೊ ಪ್ರಾಂತವನ್ನು ಬಿಟ್ಟುಕೊಡಬೇಕು ಮತ್ತು ಪೊರ್ಕಾಲಾ ಊಡವನ್ನು ರಶಿಯನ್ ನೌಕಾ ಠಾಣೆಗಾಗಿ ೫೦ ವರ್ಷ ಕಾಲ ಬಾಡಿಗೆಗೆ ಕೊಡುವದು. ಹಂಗೋ ಅರ್ಧದ್ವೀಪದ ಹಕ್ಕನ್ನು ರಶಿಯಾ ಬಿಟ್ಟುಕೊಡುವದು.

ಈ ರಾಷ್ಟ್ರಗಳು ಮಿತ್ರರಾಷ್ಟ್ರಗಳಿಗೆ ತೆರಬೇಕಾದ ಪರಿಹಾರ ದ್ರವ್ಯ ಇಷ್ಟು:—

ಇಟಲಿ: ರಶಿಯಾ, ಯುಗೋಸ್ಲಾವಿಯಾ ಗ್ರೀಸಗಳಿಗೆ ಪ್ರತಿಯೊಂದಕ್ಕೆ ೨೫೦ ಲಕ್ಷ ಪೌಂಡು. ಇತಿಯೋಪಿಯಾಕ್ಕೆ ೬೨॥ ಲಕ್ಷ ಪೌಂಡು. ಒಟ್ಟು ೮೧,೨೫೦,೦೦೦ ಪೌಂಡು.

ರುಮೇನಿಯಾ: ರಶಿಯಾಕ್ಕೆ ಮಾತ್ರ ೭೫೦ ಲಕ್ಷ ಪೌಂಡು.

ಬಲ್ಗೇರಿಯಾ; ೩೧೨॥ ಲಕ್ಷ ಪೌಂಡು-ಗ್ರೀಸ ಯುಗೋಸ್ಲಾವಿಯಾಗಳಿಗೆ ಸಮಪಾಲು.

ಹಂಗೆರಿ: ೭೫೦ ಲಕ್ಷ ಪೌಂಡು (ರಶಿಯಾಕ್ಕೆ ೫೦೦ ಲಕ್ಷ, ಯುಗೋಸ್ಲಾವಿಯಾ ಝೆಕೊಸ್ಲೊವಾಯಾಕ್ಕೆ ೨೫೦ ಲಕ್ಷ) ಈ ಪ್ರಶ್ನೆಯ ತೀರ್ಮಾನ ವಿದೇಶ ಮಂತ್ರಿಗಳಿಗೆ ಸಾರಿದೆ.

ಫಿನ್ಲಂಡ: ೭೬೦ ಲಕ್ಷ ಪೌಂಡು ರಶಿಯಾಕ್ಕೆ ಕೊಡುವದು.

ಭೂತಪೂರ್ವ ಶತ್ರು ರಾಷ್ಟ್ರಗಳ ಸೈನ್ಯಶಕ್ತಿಯ ಪರಮಾವಧಿಯನ್ನು ಈ ಕೆಳಗಿನಂತೆ ಗೊತ್ತುಪಡಿಸಲಾಗಿದೆ :—

ಇಟಲಿ: ಎರಡು ಯುದ್ಧ ಹಡಗು, ೬೭೫೦೦ ಟನ್ ಇತರ ಹಡಗು, ೨೨,೫೦೦ ನಾವಿಕರು; ಸೈನ್ಯ ಮತ್ತು ಗಡಿ ರಕ್ಷಕರು ಸೇರಿ ೧೮೫,೦೦೦ ಜನರು; ೨೫೦ ಹೋರಾಟ ವಿಮಾನ, ೧೫೦ ಸಾರಿಗೆ ವಿಮಾನ ಒಟ್ಟು ೨೫,೦೦೦ ವೈಮಾನಿಕರು.

ರುಮೇನಿಯಾ :- ಸೈನ್ಯ ೧೨೦,೦೦೦, ವಿಮಾನ ನಿರೋಧಕರು ೫೦೦೦; ಒಟ್ಟು ನೌಕಾಶಕ್ತಿ ೧೫೦೦೦ ಟನ್ ಮತ್ತು ೫೦೦೦ ನಾವಿಕರು; ೧೫೦ ವಿಮಾನಗಳು ಮತ್ತು ೮೦೦೦ ವೈಮಾನಿಕರು.

ಬಲ್ಗೇರಿಯಾ: ಭೂಸೈನ್ಯ ೫,೦೦೦ ವಿಮಾನ ನಿರೋಧಕರು ೧,೮೦೦; ನೌಕಾಶಕ್ತಿ ೭೨೫೦ ಟನ್, ನಾವಿಕರು ೩೫೦೦; ೯೦ ವಿಮಾನಗಳು ಮತ್ತು ೫೨೦೦ ವೈಮಾನಿಕರು.

ಹಂಗೆರಿ: ಸೈನ್ಯ ೬೫೫೦೦; ವಿಮಾನ ಪಡೆ ೯೦ ಮತ್ತು ೫೦೦೦ ವೈಮಾನಿಕರು.

ಫಿನ್ಲಂಡ್: ಭೂಸೈನ್ಯ ೩೦,೦೦೦; ನೌಕಾಶಕ್ತಿ ೧೦,೦೦೦ ಟನ್ ಮತ್ತು ೪೫೦೦ ನಾವಿಕರು; ೬೦ ವಿಮಾನಗಳು ಮತ್ತು ೩,೦೦೦ ವೈಮಾನಿಕರು.

### ಹೊಸ ಫ್ರೆಂಚ ರಾಜ್ಯಘಟನೆ

ಏಳು ತಿಂಗಳ ಪ್ರಯತ್ನದ ನಂತರ ಸಿದ್ಧವಾಗಿ ಕಳೆದ ಮೇಯಲ್ಲಿ ಜನ ಮತಗಣನೆಯಾದಾಗ ಫ್ರೆಂಚ ಘಟನಾಸಮಿತಿಯ ರಾಜ್ಯಘಟನೆಯ ಕರಡು ಬಹುಮತವಿಲ್ಲವೆ ಬಿದ್ದುಹೋದುದು ಎಲ್ಲರಿಗೂ ಗೊತ್ತು. ಆ ಮೇಲೆ ಹೊಸತಾಗಿ ಘಟನಾ ಸಮಿತಿ ಆರಿಸಲ್ಪಟ್ಟು ಜನರಿಗೆ ಒಂದೇ ಶಾಸನ ಸಭೆಯುಳ್ಳ ರಾಜ್ಯಘಟನೆ ಒಪ್ಪಿಗೆ ಇಲ್ಲದ್ದರಿಂದ ಸಿನೆಟು ಮತ್ತು ಶಾಸನ ಸಭೆಯುಳ್ಳ ಎರಡು ಸಭೆಗಳ ಘಟನೆ ಸಿದ್ಧವಾಯಿತು. ಈ ಘಟನೆಯ ಮೇಲೆ ಮೊನ್ನೆ ತಾ. ೧೫ ಕ್ಕಾದ ಜನಮತಗಣನೆಯ ಫಲವಾಗಿ ಅದು ಸ್ವೀಕರಿಸಲ್ಪಟ್ಟುದರಿಂದ ಒಂದು ವರ್ಷದಷ್ಟು ಹಳೆಯದಾದ ಘಟನಾತ್ಮಕ ಬಿಕ್ಕಟ್ಟು ಬಿಟ್ಟಹಾಗಾಗಿದೆ. ಆದರೆ ಈ ರಾಜ್ಯಘಟನೆಯೂ ಅತೃಪ್ತಿಕರವಾಗಿದೆಯೆಂದು ಬಗೆಯುವ ಒಂದು ಪ್ರಬಲ ಗುಂಪು ಇದೆ. ಅದುದರಿಂದಲೇ ೯೨ ಲಕ್ಷ ಮತದಾರರು, ಪರವಾಗಿಯೂ ೭೮ ಲಕ್ಷ ಜನರು ವಿರುದ್ಧವಾಗಿಯೂ ಮತವಿತ್ತಾಗ ೭೮ ಲಕ್ಷ ಜನರು ಮತವನ್ನೇ ಕೊಟಲಿಲ್ಲ. ಈ ಮತವಿಯದ ಬಹಳ ಜನರು ಡಿಗಾಲೆಯ ಪಕ್ಷದವರಿರಬೇಕು. ಡಿಗಾಲೆಯ ಎಂ. ಆರ್. ಪಿ. ಪಕ್ಷದ ಘಟನಾ ಸಮಿತಿಯ ಸದಸ್ಯರು ಈ ಕರಡು ಘಟನೆಗೆ ಬೆಂಬಲವಿತ್ತರೂ ಡಿಗಾಲೆ ಮಾತ್ರ ತನ್ನ ಅಸಮ್ಮತಿಯನ್ನು ಗುಟ್ಟಾಗಿಟ್ಟಿರಲಿಲ್ಲ. ಮೇಲ್ಮನೆ ಅಥವಾ ಸಿನೇಟಿಗೆ ಕೊಟ್ಟ ಅಧಿಕಾರ ಅತ್ಯಲ್ಪವಾಗಿದ್ದು ಕೆಳ ಮನೆಯೆ ಎಲ್ಲ ಶಾಸಕ ಅಧಿಕಾರಕ್ಕೆ ಭಾಗಿಯಾಗಿರುವದು; ಅಧ್ಯಕ್ಷನ ಅಧಿಕಾರಗಳು ಅವನನ್ನು ಬರಿ ಉತ್ಸವಮೂರ್ತಿಯಾಗಿ ಮಾಡಿಟ್ಟಿರುವವು—ಇವೆರಡು ಕಾರಣಗಳಿಂದ ಈ ಘಟನೆಯ ಮೂಲಕ ಫ್ರಾನ್ಸದಲ್ಲಿ ಒಂದು ಪಕ್ಷದ ಸರ್ವಾಧಿಕಾರ ಸ್ಥಾಪಿತವಾದೀತೆಂದು ಅವನ ಭಯ. ಅವನು ಬಹಿರಂಗವಾಗಿ ಈ ಘಟನೆಗೆ ಅಸಮ್ಮತಿ ತೋರಿದ್ದರಿಂದ ಇಷ್ಟು ಜನರು ವಿರುದ್ಧವಾಗಿ ಮತವಿತ್ತರು. ಹೀಗೆ ಅವನ ಪಕ್ಷದಲ್ಲಿ ಒಡಕುಂಟಾದುದರಿಂದ ಮುಂದಿನ ಚುನಾವಣೆಯಲ್ಲಿ ಎಂ. ಆರ್. ಪಿ. ಈಗಿನ ಪ್ರಥಮ ಸ್ಥಾನವನ್ನು ಕಳೆದುಕೊಂಡು, ಕಮ್ಯುನಿಸ್ಟರಿಗೆ ಆ ಸ್ಥಾನವನ್ನು ಬಿಟ್ಟು ಕೊಡಬಹುದೆಂದೂ ಕಮ್ಯುನಿಸ್ಟ ನಾಯಕನಾದ ಥೊರೆಜನೆ ಮುಂದಿನ ಮುಖ್ಯ ಮಂತ್ರಿಯಾಗಬಹುದೆಂದೂ ನಂಬಲಾಗಿದೆ.

### ಪೋರ್ತುಗಾಲದಲ್ಲಿ ಬಂಡಾಯ

ಡಾ. ಸಾಲಾಝಾರನ ಪೋರ್ತುಗಾಲದಲ್ಲಿ ಕಳೆದ ವಾರ ಕೆಲವು ಸೇನಾಧಿಕಾರಿಗಳು ಅವನ ವಿರುದ್ಧ ಬಂಡು ಹೂಡಿದರು. ಅಟ್ಲಾಂಟಿಕ ತೀರದ ಒಪೋರ್ಟೊ ಬಂದರ (ರಾಜಧಾನಿ ಲಿಸ್ಬನ್ನಿನಿಂದ ೧೫೦ ಮೈಲು)ದಲ್ಲಿ ಒಂದು ಮೋಟರ ದಳದವರು ಬಂಡಾಯ ಹೂಡಿ ಲಿಸ್ಬನ್ನದ ಕಡೆಗೆ ೬೦ ಮೈಲು ಸಾಗಿ ಬಂದರು. ಡಾ. ಸಾಲಾಝಾರನು ಒಡನೆ ತನಗೆ ಅಧಿಕಾರ ಬಿಟ್ಟುಕೊಡಬೇಕೆಂದು ಅವರು ಕೊನೆಯೆಚ್ಚರಿಕೆಯನ್ನು ಕಳಿಸಿದರು. ಟೆಲಿಫೋನ ಮೊದಲಾದ ಸಂಪರ್ಕಗಳು ಕೆಲ ಕಾಲ ಕತ್ತರಿಸಲ್ಪಟ್ಟವು. ಆದರೆ ಸರ್ವಾಧಿಕಾರಿ ಸಾಲಾಝಾರನ ಸೈನಿಕರು ಈ ಬಂಡಾಯವನ್ನು ಬಹಳ ಬೇಗನೆ ಹತ್ತಿಕ್ಕಿದರು. ಸಂಪರ್ಕ ಸೌಕರ್ಯಗಳನ್ನು ಸರಕಾರ ವಶಪಡಿಸಿಕೊಂಡಿತು. ಹೀಗೆ ಸರ್ವಾಧಿಕಾರಿಯ ಅಧಿಕಾರ ಇನ್ನಷ್ಟು ಹೆಚ್ಚುವಂತೆ ಮಾಡಿ ಈ ಉದಾರ ಪ್ರಯತ್ನ ಅನ್ನಿಗೇ ತಣ್ಣಗಾಯಿತು.

### ಇರಾಣಕ್ಕೆ ರಶಿಯಾದ ಒತ್ತಾಯ

ಡಾರ್ಡನೆಲ್ಸ ಪ್ರಶ್ನೆಯಲ್ಲಿ ರಶಿಯಾದ ಇಚ್ಛೆಗೆ ವಿರೋಧವಾಗಿ ವರ್ತಿಸಿದ ತುರ್ಕಿಯನ್ನು ಎಲ್ಲೆಡೆಯಿಂದಲೂ ನಿಸ್ಸಹಾಯವಾಗಿ ಮಾಡುವ ಸಲುವಾಗಿ, ಇರಾಣವನ್ನು ಸಾಅಬಾದ ಒಪ್ಪಂದದಿಂದ ಹೊರಬೀಳೆಂದು ರಶಿಯಾ ಒತ್ತಾಯಪಡಿಸುತ್ತಿದೆಯೆಂದು ಹೇಳಲಾಗುತ್ತಿದೆ. ಈ ಸಾಅಬಾದ ಒಪ್ಪಂದ ೧೯೩೭ ರಲ್ಲಿ ಮಾಡಿಕೊಳ್ಳಲ್ಪಟ್ಟದ್ದು ತುರ್ಕಿ, ಇರಾಕ, ಇರಾಣ, ಅಫಗಾಣಿಸ್ತಾನಗಳು ಸಹಿಹಾಕಿದ್ದವು. ಅದು ಒಂದು ಬಗೆಯ ಪರಸ್ಪರ ಅನಾಕ್ರಮಣ ಮತ್ತು ಆಕ್ರಮಣಕ್ಕೆ ಸಹಾಯ ಮಾಡದಿರುವ ಒಪ್ಪಂದವಾಗಿತ್ತು. ಈ ಒಪ್ಪಂದದಿಂದ ಇರಾಣ ಹೊರಬಿದ್ದರೆ ಅದು ಬಲಕುಂದಿಹೋಗುವದು.

ಅತ್ತ ದಕ್ಷಿಣ ಇರಾಣದಲ್ಲಿ ದಂಗೆಯೆದ್ದ ಗುಡ್ಡಗಾಡಿನ ಜನರೊಡನೆ ಕೇಂದ್ರಸರಕಾರ ಮಾತುಕತೆ ನಡೆಸುತ್ತಿದೆ.

### ಚೀನದಲ್ಲಿ ಶಾಂತಿಯಿಲ್ಲ

ಅಮೇರಿಕನ್ ಜನರಲ್ ಮಾರ್ಶಲ್ಲರ ಪ್ರಯತ್ನಗಳೆಲ್ಲ ನಿರಾಶೆಯಲ್ಲಿ ಕೊನೆಗೊಂಡಿವೆಯೆಂದು ಕಳೆದವಾರ ಅವರೇ ಒಪ್ಪಿಕೊಂಡರು. ಅವರು ಚೀನದ ಎರಡು ಮುಖ್ಯ ಪಕ್ಷಗಳಾದ ಅಂತರ್ಯುದ್ಧದಲ್ಲಿ ತೊಡಗಿರುವ ಕಮ್ಯುನಿಸ್ಟ ಮತ್ತು ಕೌಮಿಂಟಾಂಗ್ ಪಕ್ಷಗಳಲ್ಲಿ ಸಂಧಾನ ಮಾಡಲು ಪ್ರಯತ್ನಿಸಿದರು. ಆದರೆ ಎರಡೂ ಪಕ್ಷಗಳು ಹಟಬಿಡದೆ ಇದ್ದುದರಿಂದ ಅದೆಲ್ಲ ಬೂದಿಯಲ್ಲಿ ಹೋಮವಾಯಿತು. ಅವರ ಪ್ರಯತ್ನಗಳು ವಿಫಲವಾಗಲು ಮುಖ್ಯವಾಗಿ ಎರಡೂ ಪಕ್ಷಗಳಿಗೆ ಪರರ ಸಹಾಯದ ಭರವಸೆಯೇ ಕಾರಣವಾಗಿದೆ. ಅಮೇರಿಕೆಯ ಅತ್ಯಂತ ಮುಂದುವರಿದ ತಾಂತ್ರಿಕ ಶಕ್ತಿಯ ಸಹಾಯ ಅದರ ಅಸ್ತ್ರಶಸ್ತ್ರಗಳ ಪೂರೈಕೆ ಇವುಗಳನ್ನು ನಂಬಿ ಚಿಯಾಂಗರು ಕಮ್ಯುನಿಸ್ಟರಿಗೆ ಏನೂ ಸವಲತ್ತು ಕೊಡದೆ ಅವರನ್ನು ನಿರ್ನಾಮ ಮಾಡೇನೆಂದು ಬಗೆಯುತ್ತಿರುವದರಿಂದ ಅವರು ಬಗ್ಗುವದಿಲ್ಲ. ಅಮೇರಿಕನರು ಚೀನದಿಂದ ಹೊರಬಿದ್ದುಹೋಗಬೇಕೆಂದು ಚೀನದ ಪಿತಾಮಹ ಸನ್-ಯತ್‍ಸೆನರ ಹೆಂಡತಿಯಂಥ ಹೊಣೆಗಾರ ವ್ಯಕ್ತಿಗಳು ಹೇಳುತ್ತಿದ್ದಾರೆ. ಅಂದರೇ ಯಾದವಿ ನಿಲ್ಲಬಹುದು. ಆದರೆ ಹಾಗೆ ಮಾಡಿದರೆ ಚಿಯಾಂಗರ ರಾಜ್ಯಭಾರ ಉಳಿದೀತೆಂಬ ನಂಬಿಕೆಯಿಲ್ಲ. ಖಂಡಿತವಾಗಿ ಹೆಚ್ಚು ಕೆಲಸ ಮಾಡಿತೋರಿಸಿರುವ ಕಮ್ಯುನಿಸ್ಟರ ಕೈಗೇ ನಿಜವಾದ ಅಧಿಕಾರ ಹೋಗಿಬಿಡುವ ಸಂಭವವಿದೆ. ಹಾಗಾದರೆ ರಶಿಯಾದ ಪ್ರಭಾವ ಇಷ್ಟು ಬೆಳೆದೀತೆಂಬ ಭಯ ಅಮೇರಿಕೆಗೆ. ಈಗ ಮಾತುಕತೆ ಮುರಿದು ಚಿಯಾಂಗರ ಪಡೆಗಳು ಕಮ್ಯುನಿಸ್ಟ ಸೈನ್ಯ ಸನ್ನಿಧಿಕೇಂದ್ರವಾದ ಕಲಗಾನವನ್ನು ಆಕ್ರಮಿಸಿಕೊಂಡಿವೆ ಆದರೆ ಕಮ್ಯುನಿಸ್ಟರು ಪ್ರತಿದಾಳಿಯ ಸಿದ್ಧತೆಯಲ್ಲಿಯೆ ಇದ್ದಾರೆ. ಚೀನದ ದುರ್ದೈವ ಎಂದು ಮುಗಿಯುವದೊ!

### ಇಂಡೊನೇಶಿಯಾದಲ್ಲಿ ಮಾತುಕತೆ

ಇಂಡೊನೇಶಿಯಾದಲ್ಲಿ ಡಚ್ ಇಂಡೊನೇಶಿಯನ್ ಮುಂದಾಳುಗಳಲ್ಲಿ ಬ್ರಿಟಿಶರ ಮಧ್ಯಸ್ಥಿಕೆಯಲ್ಲಿ ಪ್ರಾರಂಭವಾದ ಮಾತುಕತೆ ಸಾಕಷ್ಟು ಪ್ರಗತಿ ಮಾಡಿದಂತೆ ತೋರುತ್ತದೆ. ಡಚ್ಚರು ಇಂಡೊನೇಶಿಯನ್ ಪ್ರಜಾರಾಜ್ಯ ಸರಕಾರವನ್ನು ಬಗ್ಗುಬಡಿಯುವದು ತಮ್ಮ ಉದ್ದೇಶವಲ್ಲೆಂದು ಬಹಿರಂಗವಾಗಿ ಸಾರಿ ಆ ದೇಶ ದೊರಕಿಸಿಕೊಂಡ ಸ್ವಾತಂತ್ರ್ಯಕ್ಕೊಂದು ಕಾಯಿದೆಬದ್ಧ ಸ್ವರೂಪವನ್ನೀಯುವವೇ ತಮ ಧ್ಯೇಯವೆಂದು ಹೇಳಿದ್ದಾರೆ. ಮಾತುಕತೆಗಳ ಫಲವಾಗಿ ಉಭಯ ಸೈನ್ಯಗಳಲ್ಲಿ ಹೋರಾಟ ನಿಲ್ಲಿಸಿ ಸಂಧಿ ಮಾಡಿಕೊಳ್ಳಲಾಗಿದೆ.

## ಪ್ರಬಲ ರಾಷ್ಟ್ರಸೈನ್ಯಗಳು ಜಗತ್ತನ್ನೆ ಮುತ್ತಿವೆ

(೧ನೇ ಪುಟದಿಂದ)

೩,೫೦,೦೦೦ ದಿಂದ ೪,೫೦,೦೦೦ ದಷ್ಟಿರುವ ಯುಗೊಸ್ಲಾವ ಸೈನ್ಯವನ್ನು ಎದುರಿಸಲು ನಿಲ್ಲಿಸಲಾಗಿದೆ.

ಟೆಂಬಲ ಬಲಗಳುಳ್ಳ ಎರಡು ಪೂರ್ಣ ದಲಗಳನ್ನು ಇಂಗ್ಲಂಡು ಗ್ರೀಸದಲ್ಲಿಟ್ಟಿದೆ. ಇದರ ಲೊಂಡನ್ನು ಗಂಡಾಂತರ ಪ್ರದೇಶವಾದ ಸಾಲೋನಿಕಾದಲ್ಲಿ ಇನ್ನೊಂದು ರಾಜಧಾನಿ ಅಥೆನ್ಸ ಬಳಿ ಇಡಲ್ಪಟ್ಟಿದೆ. ಇಚಿತ್ರದಿಂದ ಇಂಗ್ಲಂಡು ಹೊರಡುವ ಎತ್ತುಗಡೆ ನಡೆಸಿದ್ದರೂ ಅಲ್ಲಿ ಇನ್ನೂ ಅದರ ಬಹಳ ದೊಡ್ಡ ಬಲವಿದೆ. ಇದಲ್ಲದೆ ಪಾಲಿಸ್ತಾನದಲ್ಲಿ ಎರಡೂವರೆ ದಲಗಳು ಮತ್ತು ಇರಾಕ ಹಾಗು ಪರ್ಶಿಯನ್ ಉಪಸಾಗರದ ಮುಖದಲ್ಲಿ ಅನೇಕ ಚಿಕ್ಕ ತುಕುಡಿಗಳಿವೆ.

ದೂರ ಪೂರ್ವದಲ್ಲಿ ಬ್ರಿಟನ್ನು ಹಾಂಗ್‌ಕಾಂಗನ್ನು ಗಟ್ಟಿಯಾಗಿ ಹಿಡಿದುಕೊಂಡಿದೆ. ಜಪಾನದಲ್ಲಿ ಅದರ ದೊಡ್ಡ ಸಾಮ್ರಾಜ್ಯ ಸೈನ್ಯವಿದೆ. ಇಂಡೊನೇಶಿಯಾದಲ್ಲಿರುವ ಅದರ ೨೦,೦೦೦ ಸೈನ್ಯ ಈ ವರ್ಷಾಂತ್ಯದೊಳಗೆ ಹೊರಡಲಿರುವದು.

ಬ್ರಿಟಿಶ ಸೈನ್ಯ ಸ್ಥಿತಿಯಿಂದ ಗೊತ್ತು ಮಾಡಬಹುದಾದ ಸಂಗತಿಯೆಂದರೆ, ಅದು ಟ್ರೀಸ್ಟೆ—ಸ್ಟೆಟಿನ್ ರೇಖೆಯಿಂದ ಪಶ್ಚಿಮಕ್ಕಿರುವ ಭಾಗವನ್ನು ರಕ್ಷಿಸಿಕೊಳ್ಳುವ ಹಟ ತೊಟ್ಟಿದೆಯಲ್ಲದೆ ಭೂಮಧ್ಯ ಸಮುದ್ರ-ಸುಯೇಜ-ಕೆಂಪುಸಮುದ್ರ-ಪರ್ಶಿಯನ್ ಉಪಸಾಗರ ಭಾಗಗಳಲ್ಲಿರುವ ಬ್ರಿಟಿಶ ಸಾಮ್ರಾಜ್ಯ-ಜೀವಲೇಬೆಯನ್ನು ಕಾಯಬೇಕೆನ್ನುತ್ತದೆ. ಬ್ರಿಟಿಶ ಧೋರಣೆಯೇನೋ ಸಂರಕ್ಷಣಾತ್ಮಕವಾಗಿದೆ ಆದರೆ ಅದರಲ್ಲಿ ಅದು ನಿಷುರ ಮಾರ್ಗವಹಿಸಿದೆ. ಸಾಧ್ಯವಿದ್ದಷ್ಟು ಮಟ್ಟಿಗೆ ಬ್ರಿಟಿಶ ಸಾಮ್ರಾಜ್ಯವನ್ನು ಇದ್ದಂತೆ ಉಳಿಸಿಕೊಳ್ಳುವ ಹವಣಿಕೆ ಅದರದು.

### ೩ ಅಮೇರಿಕನ್ ಬಲಗಳು

ಇಂದು ಅಮೇರಿಕೆಯ ಒಟ್ಟು ಸೇನಾ ಬಲ ೨೨ ಲಕ್ಷಕ್ಕೂ ಮಿಕ್ಕಿದೆ. ಇದರಲ್ಲಿ, ನೌಕಾ ಮತ್ತು ಸಮುದ್ರ ಬಲಗಳಲ್ಲದೆ ೭ ಲಕ್ಷ ಸೈನ್ಯ ಅಮೇರಿಕೆಯಿಂದ ಹೊರಗೆ ಇದೆ. ಅಮೇರಿಕೆಯ ಅತಿ ಪ್ರಬಲ ಸೈನ್ಯ ಸಂಗ್ರಹ ಜರ್ಮನಿಯಲ್ಲಿಯೆ ಇದೆ. ಆದರೆ ಅದೀಗ ಬಹಳ ಕಡಿಮೆ ಮಾಡಲ್ಪಡುತಿದೆ.

ಹಲವಾಗಿ ಕಟ್ಟಲ್ಪಟ್ಟ ಪಡೆಗಳಲ್ಲದೆ. ಅವಕ್ಕಿಂತ ಚಿಕ್ಕ ತುಕುಡಿಗಳೂ ಪಡೆಗಳೂ ಗುಂಪುಗಳೂ ಜಗತ್ತಿನ ಎಲ್ಲ ಭಾಗಗಳಲ್ಲಿ ಹಬ್ಬಿವೆ. ಕರಿಬಿಯನ್ ದ್ವೀಪ, ಅಲಾಸ್ಕಗಳಲ್ಲಿಯಂತೆ ಕೆಲ ಸ್ಥಳಗಳಲ್ಲಿ ಈ ಚಿಲ್ಲರೆ ಬಲಗಳು ಸಾಕಷ್ಟು ಬಲಿಷ್ಠವಾಗಿದ್ದರೆ, ಬೇರೆ ಎಷ್ಟೋ ಕಡೆಗಳಲ್ಲಿ ಕೆಲವೇ ಅಧಿಕಾರಿಗಳೂ ಸೈನಿಕರೂ ಅಮೇರಿಕೆಯ ಯುದ್ಧ ಕಾಲದ ವ್ಯವಹಾರಗಳನ್ನು ಪೂರ್ಣ ವಿರಾಮಕ್ಕೆ ತರುತ್ತಿದ್ದಾರೆ.

ಆಯಿಸಲಾಂಡಿನಲ್ಲಿ ಇನ್ನೂ ೨೦೦ ಸೈನಿಕರಿದ್ದಾರೆ. ಆದರೆ ಆಯಿಸಲಾಂಡ ಸರಕಾರದೊಡನೆ ಮಾಡಿಕೊಂಡ ಹೊಸ ಒಪ್ಪಂದಕ್ಕನುಸಾರವಾಗಿ ಅವರು ಇನ್ನು ಮೂರು ತಿಂಗಳಲ್ಲಿ ಹಿಂತೆಗೆಯಲ್ಪಡುವರು. ಉತ್ತರ ಯುರೋಪಿನ ವಿಮಾನ ಮಾರ್ಗದಲ್ಲಿ ಆಯಿಸಲಂಡಿಗೆ ಬಹಳ ಮಹತ್ವವಿದೆ. ಆದುದರಿಂದ ಅಮೇರಿಕೆಯ ಹವಾ ತಜ್ಞರು, ನಿಲ್ದಾಣ ತಜ್ಞರು ಮಾರ್ಗ ತಜ್ಞರು ಮೊದಲಾದವರು ನಾಗರಿಕ ನೌಕರರನ್ನು ಇದಕ್ಕಾಗಿ ತರಬೇತುಗೊಳಿಸುತಿದ್ದಾರೆ. ಬ್ರೇಝಿಲದಿಂದ ಅಮೇರಿಕನ ಸಶಸ್ತ್ರ ಬಲಗಳು ಪೂರ್ತಿಯಾಗಿ ಹಿಂತೆಗೆದುಕೊಳ್ಳಲ್ಪಟ್ಟಂತೆಯೆ. ಕೆಲವೇ ಜನ ತಂತ್ರಜ್ಞರು ಅಲ್ಲಿ ಉಳಿದಿದ್ದಾರೆ.

ಶಾಂತಸಾಗರದಲ್ಲಿ ಅಮೇರಿಕೆಯ ಸೇನಾಬಲ ಬಹುತರವಾಗಿ ಫಿಲಿಪಾಯಿನ, ಹವಾಯಿ, ಮಾರಿಯನ್ ಮತ್ತು ವಿಶೇಷತಃ ಗುವಾಮುದಲ್ಲಿ ಕೇಂದ್ರೀಕರಿಸಲ್ಪಟ್ಟಿದೆ. ಜಪಾನಿ ಓಕಿನಾವಾದಲ್ಲಿಯೂ ತಕ್ಕಷ್ಟು ಬಲಗಳಿವೆ ಆದರೆ ಇತರ ಜಪಾನಿ ಆದಿಷ್ಟ ದ್ವೀಪಗಳಲ್ಲಿರುವ ಅಮೇರಿಕನ್ ಬಲ ಹೆಚ್ಚೇನೂ ಅಲ್ಲ.

ಅಮೇರಿಕೆಯ ಸೇನಾಬಲ ಸ್ಥಿತಿ ವಿದೇಶಗಳಲ್ಲಿರುವ ಅಮೇರಿಕನ ಬಲಗಳನ್ನು ಕಡಿಮೆಮಾಡಿ, ಬರಿ ಗಸ್ತಿ ಚಟುವಟಿಕೆ ಮತ್ತು ಸಂಭಾವ್ಯ ಶತ್ರುವಿನ ದಾಳಿಯನ್ನು ತಡೆಯುವ ಕೆಲಸಕ್ಕೆ ಮಾತ್ರ ಸೀಮಿತವಾಗಿದೆ. ಟ್ರೀಸ್ಟೆಯ ಬಳಿ ಹೊರತು ಬೇರೆಲ್ಲಿಯೂ ದಾಳಿ ಮಾಡುವಷ್ಟು ದೊಡ್ಡ ಬಲವನ್ನು ಅಮೇರಿಕೆ ಇಟ್ಟಿಲ್ಲ. ಪ್ರಬಲ ರಾಷ್ಟ್ರಗಳಲ್ಲಿ ಅಮೇರಿಕೆಯಷ್ಟು ಕಡಿಮೆ ಬಲಗಳನ್ನು ಬೇರೊಂದು ರಾಷ್ಟ್ರ ವಿದೇಶಗಳಲ್ಲಿಟ್ಟಿಲ್ಲ. ಆದರೆ ಇದರ ಬದಲು ಬಾಂಬರ ವಿಮಾನ ಬಲ, ಪ್ರಚಂಡ ನೌಕಾ ಶಕ್ತಿ ಹಾಗು ಪರಮಾಣು ಬಾಂಬಿನ ಬಲ ಅಮೇರಿಕೆಗಿದೆಯೆಂಬದನ್ನು ಮರೆಯಕೂಡದು.

### ಫ್ರಾನ್ಸದ ಬಲಗಳು

ಯುದ್ಧ ಜರ್ಜರಿತವಾದ ಫ್ರಾನ್ಸದ ಬಲಗಳು ಮಿಲಿಟರಿ ದೃಷ್ಟಿಯಿಂದ ಕ್ಷುಲ್ಲಕವಾಗಿದೆ. ಜರ್ಮನಿಯಲ್ಲಿ ಅದರ ಎರಡು ದಲಗಳು, ಅಸ್ಟ್ರಿಯಾದಲ್ಲಿ ಕೆಲ ಸಾವಿರ ಸೈನಿಕರು ಇದ್ದಾರೆ. ಮತ್ತು ಇಂಡೋಚೀನದಲ್ಲಿರುವವರು ಎಷ್ಟೆಂದು ಗೊತ್ತಿಲ್ಲ.

ಅದರ ಧೋರಣೆ ಸ್ವಾಭಾವಿಕವಾಗಿ ಆತ್ಮರಕ್ಷಣೆಯದು. ಸಾಧ್ಯವಿದ್ದರೆ ತನ್ನ ಸಾಮ್ರಾಜ್ಯವನ್ನು ಉಳಿಸಿಕೊಳ್ಳಬೇಕೆಂಬುದೇ ಅದರ ಹವಣಿಕೆ.

---

ಕಲಬುರ್ಗಿಯಲ್ಲಿ ಈ ಸಲದ ವಿಜಯದಶಮಿ ಉತ್ಸವ ಒಳ್ಳೆ ವಿಜೃಂಭಣೆಯಿಂದ ಜರಗಿತು. ಮೆರವಣಿಗೆಯಲ್ಲಿ ಸಂಸ್ಥಾನ ಕಾಂಗ್ರೆಸ ಹಾಗು ಇತ್ತಿಹಾದುಲ್ ಮುಸಲ್ಮೀನ ಸಂಸ್ಥೆಯ ಮುಂದಾಳುಗಳು ಭಾಗವಹಿಸಿದ್ದರು. ಮುಸಲ್ಮಾನ ಮುಂದಾಳುಗಳು ಮೆರವಣಿಗೆಯನ್ನು ಸ್ವಾಗತಿಸಿದರು ಇದೇ ಈ ಸಲದ ನಾಡಹಬ್ಬದ ವೈಶಿಷ್ಟ್ಯವಾಗಿದೆ.

### ಕಚಕುಳಿ

ನಡೆ ನಡೆದು ಬೇಸತ್ತಿದ್ದ ಪ್ರಯಾಣಿಕನೊಬ್ಬ ಎತ್ತಿನ ಗಾಡಿಯಲ್ಲಿ ಒರುತಿದ್ದವನೊಬ್ಬನನ್ನು ಕೇಳಿದ: "ಸ್ವಾಮೀ, ಇಲ್ಲಿಂದ ಧಾರವಾಡ ಎಷ್ಟು ದೂರ?"

"ಸುಮಾರು ಒಂದೂವರೆ ಮೈಲು."

"ನಾನೂ ಹತ್ತಲೆ?"

"ಅಹಾ, ಏನಡ್ಡಿ?"

ಮತ್ತೆ ಮುಕ್ಕಾಲು ತಾಸು ಕಳೆಯಿತು. ಕೇಳಿದನು ದಾರಿಗ: "ಇನ್ನು ಧಾರವಾಡ ಎಷ್ಟು ದೂರ?"

"ನಾಲ್ಕು ಮೈಲು."

"ಹಾಳಾಗಿ ಹೋಗಲಿ! ನೀವು ಧಾರವಾಡಕ್ಕೆ ಹೋಗುವದಿಲ್ಲ? ಮೊದಲೇ ಏಕೆ ಹೇಳಲಿಲ್ಲ?"

"ಧಾರವಾಡಕ್ಕೆ ಹೋಗಬೇಕಾಗಿತ್ತೆಂದು ನೀನು ಯಾಕಯ್ಯಾ ಹೇಳಲಿಲ್ಲ?"





ಕರ್ಮವೀರ

# ಹರಿಜನ ಪುರವಣಿ

## ನಿಜವಾದ ಹಿಂದುಸ್ತಾನ

ಹಿಂದುಸ್ತಾನದಲ್ಲಿಯ ಹಳ್ಳಿಗಳನ್ನೆಲ್ಲ ನಾನು ಆಗಾಗ ಸಂಚರಿಸಿದ್ದೇನೆ. ಈ ಸಂಚಾರದಿಂದ ನನ್ನಲ್ಲಿ ತಪ್ಪು ತಿಳುವಳಿಕೆಯಾಗಿಲ್ಲೆಂದು ಗ್ರಹಿಸಿದರೆ ಇಲ್ಲಿನ ೭ ಲಕ್ಷ ಹಳ್ಳಿಗಳಿಗೆ ಪೊಲಿಸ ಸಂರಕ್ಷಣೆ ಸಿಕ್ಕುವದಿಲ್ಲ. ಮತ್ತು ಅವರು ಅದನ್ನು ಅಪೇಕ್ಷಿಸುವುದಿಲ್ಲ ಎಂದು ನಿರ್ಧಾರದಿಂದ ಹೇಳಬಲ್ಲೆ. ಹಳ್ಳಿಯಲ್ಲಿರುವ ಒಬ್ಬನೆ ಒಬ್ಬ ಗೌಡನು ಆ ಹಳ್ಳಿಯನ್ನೆಲ್ಲ ಆಳುತಿದ್ದು ಒಳ್ಳೆ ಭಯಂಕರನಾಗಿರುವನು, "ಮಾಬಾಪರಿಗೆ" ಸಲ್ಲತಕ್ಕ ಕಂದಾಯ ವಸೂಲಿಯಲ್ಲಿ ಬಡ ವಸೂಲಿ ಮಾಡುವವನಿಗೆ ಸಹಾಯ ಮಾಡುವದು ಅವನ ಕೆಲಸ. ಮನುಷ್ಯರಿಂದ ಮತ್ತು ಪಶುಗಳಿಂದ ಅವರ ಸರಕು ಇಲ್ಲವೆ ದನಗಳನ್ನುಳಿಸುವಲ್ಲಿ ಹಳ್ಳಿಗರಿಗೆ ಪೋಲೀಸರು ಸಂರಕ್ಷಣೆ ಕೊಟ್ಟದ್ದು ನನಗೇನು ಗೊತ್ತಿಲ್ಲ. ಪೋಲೀಸ ಗೌಡನು ಅಂತಃಸ್ಥನಿದ್ದಕ್ಕೆ ಯಾರೂ ಅವನನ್ನು ದೂಷಿಸಲಾರರು. ಆ ಕೆಲಸಕ್ಕಾಗಿಯೇ ಅವನನ್ನು ಆರಿಸಿದ್ದು ಅದನ್ನು ಅವನು ಚೆನ್ನಾಗಿ ಮಾಡುವನು. ತಾನು ಜನಸೇವಕನೆಂದು ತಿಳಿದುಕೊಳ್ಳಬೇಕೆಂದು ಯಾರೂ ಅವನಿಗೆ ಕಲಿಸಿಲ್ಲ. ಅವನು ತನ್ನ ಒಡೆಯ ವಾಯಿಸರಾಯರ ಪ್ರತಿನಿಧಿ. ಕೇಂದ್ರದಲ್ಲಿ ಬದಲಾವಣೆಯಾದುದು ಹಳ್ಳಿಗೆ ಹೋಗಿ ಇನ್ನೂ ಮುಟ್ಟಿಲ್ಲ, ಅದೆಂತು ಮುಟ್ಟಬಲ್ಲದು? ಅದು ತಳದಿಂದ ಪ್ರಾರಂಭವಾಗಿಲ್ಲ. ತನ್ನ ಮಂತ್ರಿಗಳನ್ನು ತಿರುಗಿಯುವ ಇಷ್ಟೇ ಅಲ್ಲ; ಅವರನ್ನು ತುರಂಗಕ್ಕಟ್ಟುವ ನ್ಯಾಯಬದ್ಧ ಮತ್ತು ಸೈನ್ಯಾಧಿಕಾರವನ್ನು ವಾಯಿಸರಾಯರು ಇನ್ನೂ ತಮ್ಮ ಕೈಯಲ್ಲಿಟ್ಟುಕೊಂಡಿರುವರು. ವಾಯಿಸರಾಯರನ್ನು ತುರಂಗಕ್ಕಟ್ಟುವ ನ್ಯಾಯಬದ್ಧ ಇಲ್ಲವೆ ಉಳಿದ ಯಾವ ಅಧಿಕಾರವೂ ಮಂತ್ರಿಗಳಿಗಿರುವುದಿಲ್ಲ. ಸಿವಿಲ್ ಸರ್ವಂಟರು ಕೂಡ ಇನ್ನೂ ವಾಯಿಸರಾಯರ ನಿಯಂತ್ರಣದಲ್ಲಿಯೆ ಇರುವರು. ವಾಯಿಸರಾಯರು ತಮ್ಮ ಅಧಿಕಾರಗಳನ್ನೆಲ್ಲ ಬಿಟ್ಟುಗೊಡಬೇಕೆಂದು ನಾನು ಸೂಚಿಸುವುದಿಲ್ಲ; ಅಥವಾ ಅದಷ್ಟು ಬೇಗ ಬ್ರಿಟಿಶ್ ನಿಯಂತ್ರಣವನ್ನೆಲ್ಲ ಬಿಟ್ಟುಗೊಡಬೇಕೆಂದು ವಾಯಿಟಕಾಲದಿಂದ ಸೂಚನೆ ಬಂದಿದ್ದು ಅದರಂತೆ ನಡೆಯಲು ತಾವು ನಿರ್ಧರಿಸಿರುವರೆಂಬದನ್ನು ಅತಿದೂರಿನ ಹಳ್ಳಿಯು ಕೂಡ ತಿಳಿದುಕೊಳ್ಳಬೇಕೆಂಬ ಮಹೀಷೆ ಅವರದಿಲ್ಲೆಂದೂ ಇದರಿಂದ ಸೂಚಿತವಾಗುವದಿಲ್ಲ.

ಹಿಂದುಸ್ತಾನದಲ್ಲಿಯ ಪ್ರತಿಯೊಬ್ಬ ಸ್ತ್ರೀ ಪುರುಷ ಸ್ವತಃ ಪೋಲೀಸ ಎಂಬದನ್ನು ಹಿಂದುಸ್ತಾನದ ಜೀವಾಳವಾದ ಹಳ್ಳಿಯ ಅನುಭವದಿಂದ ನಾವಿನ್ನೂ ಕಲಿತಿಲ್ಲೆಂಬುದನ್ನು ತೋರಿಸಿಕೊಡುವದೆ ಇದಲ್ಲ ಬರೆಹದ ಔಚಿತ್ಯವಾಗಿದೆ ಯಾವದೆ ಧರ್ಮದವರಿರಲಿ ಅಥವಾ ಧರ್ಮವನ್ನೊಪ್ಪದವರಿರಲಿ ಪ್ರತಿಯೊಬ್ಬ ಸ್ತ್ರೀ ಪುರುಷರು, ಅಂಥ ತಮ್ಮ ನೆರೆಯವರಿಗೆ ಕೇಡುಮಾಡಬೇಕೆಂಬ ಮನೋವೃತ್ತಿಯನ್ನು ತಳೆಯದಿದ್ದರೆ ಮಾತ್ರ ಹೀಗೆ ಮಾಡಬಲ್ಲರು. ಆದರೆ ದುರ್ದೈವದಿಂದ ರಾಜಕೀಯ ಮನೋವೃತ್ತಿಯವರು ಮೇಲೆ ಸೂಚಿಸಿದಂತೆ ಮಾಡಲು ಸಿದ್ಧರಿಲ್ಲದಿದ್ದರೆ ಅವರು ಕನಿಷ್ಠ ಎಲ್ಲ ಬಗೆಯ ಭೀತಿಯನ್ನು ಬಿಟ್ಟುಗೊಟ್ಟು ಪೋಲೀಸ ಇಲ್ಲವೆ ಸೈನಿಕರ ಎಲ್ಲ ಬಗೆಯ ಸಂರಕ್ಷಣೆಯನ್ನು ತ್ಯಜಿಸುವ ನಿರ್ಧಾರ ಮಾಡಬೇಕು. ಹಿಂದುಸ್ತಾನದಲ್ಲಿಯ ಪ್ರತಿಯೊಂದು ಮನೆ ಭದ್ರಕೋಟೆಯಾಗಬೇಕು, ಅಜ್ಞಯುಗವೆಂದು ಕರೆಯಲ್ಪಡುವ ಪ್ರಾಚೀನ ಯುಗದ ಅರ್ಥದಲ್ಲಿ ಅಲ್ಲ; ಆದರೆ ಎರಡನೆಯವರಿಗೆ ಕೇಡು ಬಗೆಯದೆ ಸ್ವತಃ ಸಾಯುವ ಕಲೆಯನ್ನು ಪ್ರತಿಯೊಬ್ಬ ಕಲಿಯುವ ಬಹಳ ಪ್ರಾಚೀನಕಾಲದ ನಿಜಾರ್ಥದಲ್ಲಿ. ನಾನಲ್ಲದಿದ್ದರೂ ಎರಡನೆಯವರಾದರೂ ಕೊಲೆಗಡಕನ ಇತಿ ಶ್ರೀ ಮುಗಿಸಲಿ ಎಂಬ ಇಚ್ಛೆಯನ್ನು ಕೂಡ ಅವನು ತಾಳಬಾರದೆಂದು ಭಿನ್ನ ಶಬ್ದಗಳಲ್ಲಿ ಹೇಳಬಹುದಾಗಿದೆ. ಹೀಗಾಗುವ ವರೆಗೆ ಹಿಂದುಸ್ತಾನ ತನ್ನ ನ್ಯಾಯವಾದ ಸ್ಥಾನವನ್ನು ಸಂಪಾದಿಸಲಾರದು ಪ್ರತಿಯೊಬ್ಬರಲ್ಲಿ ಈ ಪಾಠ ಮುದ್ರೆಯೊತ್ತಿದಂತಾದರೆ ಅದೆಷ್ಟು ಚೆನ್ನಾಗುವದು? ಇದರ ನಿದರ್ಶನ ಹುಡುಕುವ ತೊಂದರೆ ತೆಗೆದುಕೊಂಡರೆ ಈ ಪಾಠಕ್ಕೆ ಬೇಕಾದಷ್ಟು ನಿದರ್ಶನಗಳು ಸಿಕ್ಕುವವು.

ಹೊಸದಿಲ್ಲಿ — ಮೋ. ಕ. ಗಾಂಧಿ

೦೨—೧೦—೧೯೪೬

## ಟೀಕಟಿಪ್ಪಣೆಗಳು

### ಹಿಂದೂ ನೀರು ಮತ್ತು ಮುಸ್ಲಿಮ ನೀರು

ಹಿಂದುಸ್ತಾನದ ರೇಲ್ವೆ ಗಾಡಿಗಳಲ್ಲಿ ಮೊದಲನೆ ಸಲ ಪ್ರವಾಸಮಾಡುವ ಪರಕೀಯನೊಬ್ಬ ಹಿಂದೂ ಇಲ್ಲವೆ ಮುಸ್ಲಿಂ ನೀರು ಚಹಾ ಮೊದಲಾದ ನಾಚಿಗೆ ಹುಟ್ಟಿಸುವಂಥ ಶಬ್ದಗಳನ್ನು ತನ್ನ ಜೀವನದಲ್ಲಿಯೆ ಮೊದಲನೆ ಸಲ ಕೇಳಿ ದುಃಖದಿಂದ ಬೆಚ್ಚಿಬೀಳಬಹುದು. ಇದೀಗ ಕೇಂದ್ರ ಸರಕಾರ ಸಂಪೂರ್ಣ ರಾಷ್ಟ್ರೀಯವಾಗಿದೆ. ಅಸಫಅಲ್ಲಿಸಾಹೇಬರಂಥ ಪ್ರಮುಖ ವ್ಯಕ್ತಿಗಳು ರೇಲ್ವೆ ಮತ್ತು ಸಾರಿಗೆ ಖಾತೆಯ ಮಂತ್ರಿಗಳಾಗಿರುವಾಗ ಇದನ್ನು ಕೇಳುವದು ಉದ್ವೇಗಕರವಾಗಿದೆ. ಹಿಂದುಸ್ತಾನಕ್ಕೆ ಅನ್ವಯಿಸುವ ಈ ವಿಚಿತ್ರ ನಾಚಿಕೆಗೇಡಾದ ಸಂಗತಿ ಬೇಗನೆ ಕೊನೆಗೊಳ್ಳುವದೆಂದು ಆಶಿಸಲಾಗಿದೆ. ರೇಲ್ವೆ ಖಾತೆ ಮುಸಲ್ಮಾನ ಮಂತ್ರಿಯ ಕೈಯಲ್ಲಿರುವದರಿಂದ ಹಿಂದುಗಳಿಗೆ ನ್ಯಾಯ ದೊರೆಯಲಾರದೆಂದು ಯಾರೂ ಊಹಿಸಬಾರದು. ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳಲ್ಲಿ ಹಿಂದು ಮುಸಲ್ಮಾನ ಇಲ್ಲವೆ ಬೇರೆ ಯಾವದೇ ಜಾತಿಯ ಭೇದಭಾವಗಳಿರುವುದಿಲ್ಲ; ಇರತಕ್ಕದ್ದಲ್ಲ. ಎಲ್ಲರೂ ಹಿಂದೀಯರೇ. ಧರ್ಮ ಖಾಸಗಿ ವಿಷಯ. ಅಲ್ಲದೆ ಮಂತ್ರಿಮಂಡಳದ ಸದಸ್ಯರು ದಿನದ ಕೆಲಸ ಮುಗಿದ ಬಳಿಕ ಪ್ರತಿಯೊಬ್ಬ ಸದಸ್ಯ ಏನೇನು ಮಾಡಿದನೆಂಬುದರ ಅಢಾವೆ ತೆಗೆದುಕೊಳ್ಳುವ ಅನುಕರಣೀಯ ಉಪಕ್ರಮವನ್ನು ಹಾಕಿಕೊಂಡಿರುವರು. ಪ್ರತಿ ಮಂತ್ರಿಗಳ ಕೆಲಸದಲ್ಲಿ ಸಂಯುಕ್ತವಾಗಿ ಹಾಗು ಪ್ರತ್ಯೇಕವಾಗಿ ಮಂತ್ರಿಮಂಡಳವೆಲ್ಲ ಹೊಣೆಗಾರವಿದೆ. ಅದು ತನ್ನ ಖಾತೆಯಲ್ಲಿ ಬರುವದಿಲ್ಲೆಂದು ಹೇಳಿ ಯಾವ ಮಂತ್ರಿಗೂ ಇಂಥದೊಂದು ಕೆಲಸ ತನ್ನ ಅಧಿಕಾರಕ್ಷೇತ್ರದಲ್ಲಿಲ್ಲ ಎಂದು ಹೇಳಿಕೊಳ್ಳಲಿಕ್ಕೆ ಬರಲಾರದು. ಆದುದರಿಂದ ರೇಲ್ವೆ ಸ್ಟೇಶನಗಳಲ್ಲಿ ಪ್ರತಿಯೊಂದು ಜಾತಿಗೂ ಎಲ್ಲವೂ ಪ್ರತ್ಯೇಕವಾಗಿರಬೇಕೆಂಬ ಅನುಚಿತ ರೂಢಿಯು ಹೋಗುವದೆಂದು ಭಾವಿಸಲು ನಮಗೆ ಅಧಿಕಾರವಿದೆ. ಎಲ್ಲವೂ ಸ್ವಚ್ಛವಿರಬೇಕಾದುದು ಎಲ್ಲರೂ ಅಪೇಕ್ಷಿಸತಕ್ಕ ಮಾತು. ಎಲ್ಲ ಪೇಯ ಪದಾರ್ಥಗಳಿಗೆ ನಳದ ತೋಟಿಯನ್ನುಪಯೋಗಿಸಿದರೆ ಎಂಥ ಸನಾತನಿಯೂ ಆಕ್ಷೇಪಿಸಲಾರನು. ಶಿಷ್ಟ ಜನರು ತಮ್ಮ ಸ್ವಂತ ತಂಬಿಗೆ, ಕಪ್ಪು ಮೊದಲಾದವುಗಳನ್ನಿಟ್ಟುಕೊಳ್ಳಬಹುದು. ಮತ್ತು ಹಾಲು ಚಹಾ ಕಾಫಿ ನೀರು ಮೊದಲಾದವುಗಳನ್ನು ನಲ್ಲಿಯಿಂದ ತೆಗೆದುಕೊಳ್ಳಬಹುದು. ಇದರಲ್ಲಿ ಧರ್ಮದಲ್ಲಿ ಕೈಹಾಕಿದಂತೆ ಆಗುವದಿಲ್ಲ. ರೇಲ್ವೆ ಸ್ಟೇಶನಗಳಲ್ಲಿ ಏನಾದರೂ ಕೊಳ್ಳಲೆಬೇಕೆಂದು ಯಾರೂ ಒತ್ತಾಯಪಡಿಸುವದಿಲ್ಲ. ಪ್ರವಾಸದಲ್ಲಿ ಅನೇಕ ಜನರು ಅನ್ನ ನೀರು ತೆಗೆದುಕೊಳ್ಳದೆ ಉಪವಾಸ ಮಾಡುವದೂ ಉಂಟು. ಈಗಲು ನಾವೆಲ್ಲ ಅದೇ ಹವೆಯನ್ನು ಶ್ವಾಸಿಸುವೆವು. ಒಂದೇ ಭೂಮಿತಾಯಿಯ ಮೇಲೆ ನಡೆಯುವೆವು. ಇದೊಂದು ಬಗೆಯ ಶುದ್ಧೈವವೆನ್ನಬೇಕು!

ರೇಲ್ವೆ ಸ್ಟೇಶನಗಳಲ್ಲಿಯಾದರೂ ಎಲ್ಲ ಬಗೆಯ ಜಾತೀಯ ಘೋಷಣೆಗಳು ಬೇಕಾಯದೇಶೀರವೆಂದು ಸಾರಲ್ಪಡಬೇಕು. ಹಿಂದುಸ್ತಾನದಲ್ಲಿಯ ಬೇರೆ ಬೇರೆ ಜಾತಿಗಳಲ್ಲಿ ಬಾಂಧವ್ಯ ಭಾವನೆ ಬೆಳೆಸಲು ಮತ್ತು ಕೋಟ್ಯವಧಿ ಪ್ರವಾಸಿಕರಿಗೆ ಅತ್ಯಂತ ಶುಚಿತ್ವದ, ಆರೋಗ್ಯದ ಮತ್ತು ಸ್ವಚ್ಛತೆಯ ಶಿಕ್ಷಣ ಕೊಡಲು ಉಗಿಬಂಡಿಗಳು ಮತ್ತು ಹಡಗಗಳು ಅತ್ಯುತ್ತಮ ಸಾಧನಗಳಾಗಿವೆಂದು ನಾನು ಈ ಪತ್ರಿಕೆಯಲ್ಲಿ ಅನೇಕ ಸಲ ಹೇಳಿರುವೆನು. ತಮ್ಮ ನಿರ್ಧಾರದಂತೆ ನಡೆಯುವ ಧೈರ್ಯ ಮಂತ್ರಿಮಂಡಳದವರಲ್ಲಿ ಬರಲೆಂದೂ ಇದನ್ನು ಸಂಪೂರ್ಣ ಯಶಸ್ವಿ ಮಾಡಲು, ರೇಲ್ವೆ ನೌಕರರ ಮತ್ತು ಸಾರ್ವಜನಿಕರ ಸಂಪೂರ್ಣ ಸಹಕಾರ ಸಿಕ್ಕುವುದೆಂದೂ ಆಶಿಸುವಾ.

ಹೊಸದಿಲ್ಲಿ — ಮೋ. ಕ. ಗಾಂಧಿ

೦೨—೧೦—೧೯೪೬

### ಅಂತಕ ಆಲಿಂಗನ

ಮುಂಬಯಿಯಲ್ಲಿ ಮೊನ್ನೆ ದಿನ ಹಿಂದೂವೊಬ್ಬನು ಮುಸಲ್ಮಾನ ಮಿತ್ರನಿಗೆ ಆಶ್ರಯ ಕೊಟ್ಟನು. ಇದರಿಂದ ರೊಚ್ಚಿಗೆದ್ದು ಹಿಂದೂ ಜನಸಮೂಹವು ಆ ಮುಸ್ಲಿಮ ಮಿತ್ರನ ತಲೆಯನ್ನು ಕೊಡೆಂದು ಕೇಳಹತ್ತಿತು. ಹಿಂದುವು ತನ್ನ ಮಿತ್ರನನ್ನೊಪ್ಪಿಸಲು ಒಪ್ಪಲಿಲ್ಲ. ಆದುದರಿಂದ ಇಬ್ಬರೂ ಅಂತಕ ಆಲಿಂಗನಗೊಂಡರು. ವಿಶ್ವಾಸಾರ್ಹ ಜನರು ನನಗೆ ಇದನ್ನೆಲ್ಲ ವರ್ಣಿಸಿ ಹೇಳಿದರು. ಉನ್ಮಾದಾವಸ್ಥೆಯಲ್ಲಿಯೂ ಶೌರ್ಯದ ಇದೊಂದೇ ಉದಾಹರಣೆಯಲ್ಲ. ಕಲಕತ್ತೆಯಲ್ಲಿ ಇತ್ತೀಚೆ ನಡೆದ ರಕ್ತದ ಮಡುವಿನಲ್ಲಿ ಮುಸ್ಲಿಮರು ತಮ್ಮ ಪ್ರಾಣಗಳನ್ನು ಗಂಡಾಂತರದಲ್ಲಿ ನೂಕಿಯೂ ತಮ್ಮ ಹಿಂದೂ ಮಿತ್ರರಿಗೆ ಆಶ್ರಯ ಕೊಟ್ಟದ್ದುಂಟು, ಹಿಂದೂಗಳು ತಮ್ಮ ಮುಸಲ್ಮಾನ ಮಿತ್ರರನ್ನು ಸಲಹಿದ್ದುಂಟು. ಎಲ್ಲಿಯೂ ಯಾವ ಕಾಲಕ್ಕೂ ಮಾನವನಲ್ಲಿ ದೇವಾಂಶ ಪ್ರದರ್ಶಿಸಲ್ಪಡದಿದ್ದರೆ ಮಾನವ ಕುಲವೇ ನಾಶ ಹೊಂದಿ ಹೋಗಬಹುದು.

ಮುಂಬಯಿ ಮುಖ್ಯ ಮಂತ್ರಿ ಶ್ರೀ ಬಾಳಾಸಾಹೇಬ ಖೇರರು ಮುಸಲ್ಮಾನ ಜನಸಮೂಹದ ರೊಚ್ಚನ್ನು ಶಾಂತಗೊಳಿಸಲು ಮತ್ತು ಮರಣ ನಿಶ್ಚಿತವೆಂದು ತಿಳಿದಿದ್ದರೂ ಅದನ್ನೆದುರಿಸಲು ಧಾವಿಸಿದ ಇಬ್ಬರು ಯುವಕರ ಕೃತ್ಯವನ್ನು ಗೌರವಪರ ಶಬ್ದಗಳಲ್ಲಿ ಬಣ್ಣಿಸಿರುವರು. ಅವರು ಮರಣದಲ್ಲಿಯೆ ತಮ್ಮ ನಿಜ ಮಿತ್ರನನ್ನು ಕಂಡುಕೊಂಡರು. ಇಂಥ ಸ್ವಾರ್ಥತ್ಯಾಗ, ಪವಿತ್ರಕೃತ್ಯದ ಅಮೂಲ್ಯ ಮಹತ್ವವನ್ನು ಎಂಥ ಪರಿಹಾಸಕನೂ ಅಲ್ಲಗಳೆಯಲಾರನು. ಇಂಥ ಪ್ರತಿಯೊಂದು ಸ್ವಾರ್ಥತ್ಯಾಗವು ಯಶಸ್ಸಿನಲ್ಲಿ—ತೋರಿಕೆಯ—ಕೊನೆಗೊಂಡರೆ ಅದು ಅನಾಳ ಸ್ವಾರ್ಥತ್ಯಾಗವೆನಿಸುವದು. ಇಂಥ ಉದಾಹರಣೆಗಳು ಸಾಕಷ್ಟು ಹೆಚ್ಚಾದರೆ ಧರ್ಮದ ಹೆಸರಿನಲ್ಲಿ ನಡೆಯುವ ಈ ವಿಚಾರಹೀನ ಹತ್ಯಾಕಾಂಡವು ನಿಲ್ಲುವುದೆಂಬುದೆ ಇದರಿಂದ ಹೊರಡುವ ನೀತಿಬೋಧೆ. ಆದರೆ ವಂಚನೆ, ವಿಡಂಬಕ ಶೌರ್ಯವಿರಬಾರದೆಂಬುದು ಅತ್ಯವಶ್ಯಕ ಶರ್ತಾಗಿದೆ. ನಾವು ಇದ್ದಂತೆಯೇ ಕಾಣಿಸಿಕೊಳ್ಳುವ.

ಹೊಸದಿಲ್ಲಿ — ಮೋ. ಕ. ಗಾಂಧಿ

೦೩—೧೦—೧೯೪೬

### ಪುನಶ್ಚ ಡಾ. ಲೋಹಿಯಾ

ಡಾ. ರಾಮ ಮನೋಹರ ಲೋಹಿಯಾರವರು ಗೋವಾ ಹಾಯಕೋರ್ಟಿನ ಮುಖ್ಯ ನ್ಯಾಯಾಧೀಶರಿಗೆ ಒರೆದ ಪತ್ರವು ವಿಚಾರಣೀಯವಾಗಿದೆ. ಕೇವಲ ಓದಿ ಬಿಡುವಂತಹದಾಗಿಲ್ಲ. ದೈನಿಕ ಪತ್ರಿಕೆಗಳಲ್ಲಿ ಪ್ರಸಿದ್ಧವಾದಂತೆ ನಾನು ಅದನ್ನು ಕೆಳಗೆ ಕೊಡುತ್ತೇನೆ.

"ನನ್ನ ಬಂಧನವಾದಾಗ, ನನಗೆ ಗೊತ್ತಿದ್ದರ ಮಟ್ಟಿಗೆ ಗೋವಾ ಸರಕಾರದ ಯಾವ ಕಾಯದೆಗಳನ್ನೂ ನಾನು ಮುರಿದಿದ್ದಿಲ್ಲ. ನಾನು ಮುರಿಯಬೇಕೆಂದು ಮನಸಿನಲ್ಲಿ ಮಾಡಿರಬಹುದು. ಆದು ಅಪ್ರಸ್ತುತ. ಕೌಲೇಮದಲ್ಲಿ ಪೋಲೀಸ ಅಧಿಕಾರಿಯು ನನ್ನ ಡಬ್ಬಿಯಲ್ಲಿ ಬಂದನು. ನನಗಾವ ಪ್ರಶ್ನೆಗಳನ್ನೂ ಕೇಳದೆ ನೇರವಾಗಿ ನನ್ನನ್ನು ಸೆರೆಹಿಡಿದನು. ಇಂದಿನ ಅಂತರ್‌ರಾಷ್ಟ್ರೀಯ ಕಾಯದೆಯಂತೆ ಕದಾಚಿತ್ ಪೋರ್ತುಗೀಜ ಸರಕಾರದವರಿಗೆ ತಮಗೆ ಬೇಡಾದ ಪರಕೀಯರನ್ನು ಸೆರೆಹಿಡಿದು ಹೊರಗಟ್ಟಲು ಅಧಿಕಾರವಿರಬಹುದು. ಆದರೆ ಪ್ರತ್ಯಕ್ಷವಾಗಿ ಕಾಯದೆಯನ್ನು ಮುರಿಯುವ ವರೆಗೆ ಯಾರನ್ನೂ ತುರಂಗದಲ್ಲಿರಿಸುವ ಅಧಿಕಾರ ಅವರಿಗೆ ನಿಶ್ಚಯವಾಗಿ ಇರುವದಿಲ್ಲ. ಪೋರ್ತುಗೀಜ ಸರಕಾರದವರು ನಾನು ಪರಕೀಯನೆಂದು ಹಿಂದೆಯೇ ಸಾರಿರುವರು. ಮತ್ತು ಅದಕ್ಕಾಗಿ ಅಂತರ್‌ರಾಷ್ಟ್ರೀಯ ಕಾಯದೆಗೆ ಅವರು ಶರಣುಹೋಗಿರುವರು. ನನ್ನನ್ನು ಬೇಕಾಯದೇಶೀರ ರೀತಿಯಿಂದ ತುರಂಗದಲ್ಲಿಟ್ಟದ್ದಕ್ಕಾಗಿ ಅವರು ನನ್ನ ಕ್ಷಮೆ ಕೇಳಬೇಕಾಗಿದೆ. ನನಗೆ ನಷ್ಟ ಪರಿಹಾರ ಕೊಡಬೇಕಾಗಿದೆ. ಅದು ಸಮ್ಮತವಿರದಿದ್ದರೆ ಅವರು ಗೋವಾ ಮತ್ತು ಹಿಂದುಸ್ತಾನದ ಇತರ ಭಾಗಗಳಲ್ಲಿ ಅಂತರ್‌ರಾಷ್ಟ್ರೀಯ ಕಾಯದೆಯನ್ನು ಹಚ್ಚುವ ಪ್ರಯತ್ನವನ್ನಾದರೂ ಬಿಟ್ಟುಬಿಡಲಿಕ್ಕೆ ಬೇಕು. ಇದಲ್ಲದೆ ಸಪ್ಟೆಂಬರ ೨೯ ರಿಂದ ಅಕ್ಟೋಬರ ೩ರ ವರೆಗೆ ಅವರು ನನ್ನನ್ನು ಕತ್ತಲೆ ಕೋಣೆಯಲ್ಲಿರಿಸಿದರು. ಆ ಕತ್ತಲೆ ಕೋಣೆಯಲ್ಲಿ ಮನುಷ್ಯ ಬದುಕಿ ಉಳಿಯಲು ಮಾತ್ರ ಸಾಕಷ್ಟು ಹವೆಯಾಡುತ್ತಿತ್ತು. ಈ ಬಗೆಯಾಗಿ ನನ್ನನ್ನು ನಡೆಸಿಕೊಂಡದ್ದಕ್ಕಾಗಿ ಅವರು ಮತ್ತಷ್ಟು ನನ್ನ ಕ್ಷಮೆಕೋರಬೇಕಾಗಿದೆಯಲ್ಲದೆ ನಷ್ಟ ಪರಿಹಾರವನ್ನೂ ಕೊಡಬೇಕಾಗಿದೆ.

"ಪರಿಸ್ಥಿತಿ ಚೆನ್ನಾಗಿದ್ದರೂ ನನ್ನನ್ನು ಕತ್ತಲೆ ಕೋಣೆಯಲ್ಲಿಯೇ ಇರಿಸಿದರು. ಸ್ನಾನಕ್ಕಾಗಿ ಮಾತ್ರ ಹೊರಗೆ ಬಿಡುತಿದ್ದರು. ಉಳಿದೆಲ್ಲ ವೇಳೆಯಲ್ಲಿ ಅಲ್ಲಿಯೆ ಇಡುತಿದ್ದರು. ಹೊರಗಿನ ಸಂಪರ್ಕ ನನಗೆ ಸ್ವಲ್ಪ ಮಟ್ಟಿಗೂ ಇರುತಿರಲಿಲ್ಲ. ನನ್ನನ್ನು ತುರಂಗದಲ್ಲಿಟ್ಟದ್ದು ಎಷ್ಟೊಂದು ಅಕ್ರಮವಾಗಿತ್ತೆಂಬುದಕ್ಕೆ ಇವು ಮತ್ತಷ್ಟು ಪ್ರಬಲ ಕಾರಣಗಳಾಗಿವೆ."

ಡಾ. ಲೋಹಿಯಾರವರು ನಷ್ಟ ಪರಿಹಾರ ಕೇಳಿದ್ದನ್ನು ನೋಡಿ ಯಾರೂ ಉಪಹಾಸ ಮಾಡಕೂಡದು. ಅವರಿಗೆ ಪ್ರಭುತ್ವದ ಬೆಂಬಲವಿದ್ದರೆ ಗೋವಾ ಅಧಿಕಾರಿಗಳು ಬೇಗನೆ ಅವರಿಗೆ ಕ್ಷಮೆ ಕೇಳುತಿದ್ದರಲ್ಲದೆ ನಷ್ಟ ಪರಿಹಾರ ಕೊಡಲಿಕ್ಕೂ ಸಿದ್ಧರಾಗುತಿದ್ದರು. ಪ್ರಭುತ್ವದವರು ಕ್ಷುದ್ರ ಪ್ರಜೆಗಳಿಗಾದ ಗಾಯ ಅಥವಾ ಅಪಮಾನದ ಬಗ್ಗೆ ನಷ್ಟಪರಿಹಾರವನ್ನು ಕೇಳ

—ಆ ನೇ ಪುಟಕ್ಕೆ

## ಟೀಕೆ ಟಿಪ್ಪಣಿಗಳು

(೭ನೇ ಪುಟದಿಂದ)

ಅದನ್ನು ಪಡೆಯುವದೇನು ಅಪೂರ್ವ ಸಂಗತಿಯಲ್ಲ ಡಾ. ಲೋಹಿಯಾರವರೇನು ಕ್ಷುದ್ರ ಮನುಷ್ಯರಲ್ಲ. ಒಳ್ಳೇದು ಹಿಂದುಸ್ತಾನದಲ್ಲಿದೀಗ ರಾಷ್ಟ್ರೀಯ ಸರಕಾರವಿದೆ. ಉಳಿದವರಷ್ಟೇ ಅವರೂ ಕೋಮಲ ಮನಸಿನವರಾಗಿರುವರೆಂಬುದು ನಿಶ್ಚಿತ. ಅವರು ಈ ಬಗ್ಗೆ ಗೋವಾ ಸರಕಾರದವರಿಗೆ ತಮ್ಮ ಪ್ರತಿಭಟನೆಯನ್ನು ಕಳಿಸಿ ಈ ರೀತಿ-ನೀತಿಗಳನ್ನು ಸುಧಾರಿಸಿಕೊಳ್ಳಲು ತಿಳಿಸಿದ್ದರೆ ನನಗೇನು ಆಶ್ಚರ್ಯವೆನಿಸಲಾರದು. ಅದೇನೆ ಇದ್ದರೂ ರಾಷ್ಟ್ರೀಯ ಸರಕಾರಕ್ಕೆ ಮತ್ತು ಅಪಾಯಕ್ಕೊಳಗಾದ ಡಾ. ರಾಮಮನೋಹರ ಲೋಹಿಯಾರವರಿಗೆ ಸಾರ್ವಜನಿಕಾಭಿಪ್ರಾಯದ ಬೆಂಬಲವಿರಲಿ. ಅವರಿಗೆ ಅಪಾಯ ಮಾಡಿ ಗೋವಾದಲ್ಲಿಯ ನಮ್ಮ ದೇಶಬಾಂಧವರಿಗೆ ಮತ್ತು ತದ್ವಾರಾ ಇಡೀ ಭರತಖಂಡಕ್ಕೆ ನೋವನ್ನುಂಟುಮಾಡಿದಂತಾಗಿದೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೧೩—೧೦—೪೬

## ಇಂಗ್ಲೀಶ - ಹಿಂದುಸ್ತಾನಿ ಶಬ್ದಕೋಶ

ಇಂಗ್ಲೀಶ— ಹಿಂದುಸ್ತಾನೀ ಶಬ್ದಕೋಶವು ಹರಿಜನ ಸೇವಕದಲ್ಲಿ ಏಕೆ ಪ್ರಸಿದ್ಧವಾಗುವದಿಲ್ಲೆಂದು ಮೊನ್ನೆ ದಿನ ಗೆಳೆಯರೊಬ್ಬರು ನನಗೆ ಕೇಳಿದರು. ಹರಿಜನದಲ್ಲಿ ಮಾತ್ರ ಪ್ರಸಿದ್ಧವಾಗುವದೆಂದು ನಾನು ಹೇಳಿದೆ. ಮತ್ತು ಅವನು ಬಹಳ ನಿರಾಶೆಗೊಂಡನು. ಇಂಗ್ಲೀಶ ಬಲ್ಲವರಿಗಾಗಿ ಮಾತ್ರ ಅದು ಇರುವದೆಂದೂ ಅಂತೆಯೆ ಗುಜರಾಥಿ ಸಂಚಿಕೆಯಲ್ಲಿ ಇಲ್ಲವೆ ಹಿಂದುಸ್ತಾನೀ ಸಂಚಿಕೆಯಲ್ಲಿ ಪ್ರಸಿದ್ಧವಾಗುವದಿಲ್ಲೆಂದೂ ನಾನು ಹೇಳಿದೆ. ಆದರೆ ಈ ಶಬ್ದಕೋಶ ಬೇಕಾದವರು ಪ್ರತ್ಯೇಕ ಪುಟಗಳನ್ನು ಅಂಚೆ ವೆಚ್ಚಕೊಟ್ಟು ತರಿಸಿಕೊಳ್ಳಬಹುದು ಹಿಂದಿನ ಸಂಚಿಕೆಗಳನ್ನೂ ಅವರು ಕೊಳ್ಳಬಹುದು.

ಹೊಸದಿಲ್ಲಿ — ಮೋ ಕ ಗಾಂಧಿ

೧೭-೧೦-೪೬ — ಹಿಂದುಸ್ತಾನೀಯಿಂದ

## ಪಂಚಮ ಸ್ವಾತಂತ್ರ್ಯ

ದ್ವಿತೀಯ ಮಹಾಯುದ್ಧದ ಕಾಲಕ್ಕೆ ಅಧ್ಯಕ್ಷ ರೂಜವೆಲ್ಟರು ಸಾರಿದ ಚತುಃಸ್ವಾತಂತ್ರ್ಯಕ್ಕೆ ನೇಕನಾಮದಾರ ಜೆ. ಎಚ್. ಹಾಫಮೇಯರರು, ವಿಟ-ವಾಟರ ಸ್ರ್ಯಾಂಡ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭದ ಕಾಲಕ್ಕೆ ಕುಲಪತಿಗಳೆಂದು ಮಾಡಿದ ಭಾಷಣದಲ್ಲಿ ಪಂಚಮ ಸ್ವಾತಂತ್ರ್ಯವೊಂದನ್ನು ಜೋಡಿಸಿದರು. ವರ್ಣದ್ವೇಷ ಕುಲದ್ವೇಷಗಳ ವಿಮುಕ್ತಿಯೆ ಆ ಪಂಚಮ ಸ್ವಾತಂತ್ರ್ಯ. ನೇಕನಾಮದಾರ ಹಾಫಮೇಯರರು ಹೇಳಿದರು.

"ನಾವು ಇಡೀ ಜನಾಂಗವೆಲ್ಲ ಇಷ್ಟೊಂದು ಪೂರ್ವಗ್ರಹದೂಷಿತರಾಗಿರುವಾಗ, ನಮ್ಮ ದಕ್ಷಿಣ ಆಫ್ರಿಕೆಯಲ್ಲಿಯ ಬಂಧವರೊಡನೆ ನ್ಯಾಯ್ಯವಾಗಿ ವ್ಯವಹರಿಸುವಾಗ ವರ್ಣದ ಪ್ರಶ್ನೆ ಅಡ್ಡಬರುವದಕ್ಕೆ ಅವಕಾಶ ಕೊಡುತಿರುವಾಗ ಮತ್ತು ಯುವನ- ಯಹೂದೀ ವಿರೋಧಿ ಯಾವ ನಾಜಿ ತತ್ವಗಳನ್ನು ಬಗ್ಗುಬಡಿಯಲು ನಾವು ಹೋರಾಡಿದೆವೊ ಆ ನಾಜೀ ಮುಖ್ಯ ಸೂತ್ರವಾದ ವರ್ಣವಿರೋಧಿ ತತ್ವಗಳಿಗೆ ನಾವು ಬಲಿಯಾಗಿರುವಾಗ ಸ್ವತಂತ್ರ ಜನಾಂಗವೆಂದೂ ಸ್ವಾತಂತ್ರ್ಯ ಪರಂಪರೆಯ ಪುರಸ್ಕರ್ತರೆಂದೂ ನಾವು ಜಂಭಕೊಚ್ಚಿಕೊಳ್ಳುವದು ಅಪಹಾಸವೇ ಸರಿ- ಕಮ್ಯುನಿಷ್ಟ- ಅಂತೆಯೇ ಎಲ್ಲರಿಂದಲೂ ತಿರಸ್ಕೃತ- ಎಂದು ಹೇಳಿಕೊಂಡೇ ಎಲ್ಲ ಜನಾಂಗದವರಿಗೂ ನ್ಯಾಯ ದೊರೆಯಬೇಕೆಂದು ಕೇಳಿಕೊಳ್ಳುವ ಇಲ್ಲವೆ ಯುರೋಪೇತರರನ್ನು ಕಾಯದೆಯ ದೃಷ್ಟಿಯಲ್ಲಿ ಯುರೋಪಿಯನ್‌ರಂತೆಯೇ ನಡೆಸಿಕೊಳ್ಳಬೇಕೆಂದು ಸೂಚಿಸುವ ಮನೋವೃತ್ತಿ ಇಲ್ಲದಿರುವದೆ ದಕ್ಷಿಣ ಆಫ್ರಿಕೆಯಲ್ಲಿಯ ಪೂರ್ವಗ್ರಹಕ್ಕೆ ಉದಾಹರಣೆಯಾಗಿದೆಂದು ಹೇಳಬಹುದಾಗಿದೆ.

"ದಕ್ಷಿಣ ಆಫ್ರಿಕೆಯ 'ಹೆರೆನ್‌ವೊಲ್ಪ್' ಮನೋವೃತ್ತಿಯಲ್ಲಿಯೆ ನಮ್ಮ ಜನಾಂಗ ಸಮಸ್ಯೆಯ ಆಕರ್ಷ ಇದೆಂಬುದು ನಿಷ್ಠುರ ಸತ್ಯವಾಗಿದೆ. ನಮಗೆ ರುಚಿಸಲಿ ರುಚಿಸದಿರಲಿ ಇದನ್ನು ನಾವು ಒಪ್ಪಲಿಕ್ಕೆಬೇಕು. ಆ ಮನೋವೃತ್ತಿಯನ್ನು ಬದಲಿಸುವಲ್ಲಿಯೆ ಆ ಸಮಸ್ಯೆಗಳ ಪರಿಹಾರವನ್ನು ಕಾಣಬಹುದಾಗಿದೆ. ನಮ್ಮ ಸ್ಥಾನಿಕ ಸಮಸ್ಯೆಯ ಪರಿಹಾರ ಮಾರ್ಗವನ್ನು ನಾವು ಕಂಡುಕೊಂಡಿದ್ದೇವೆಂದು ಹತ್ತು ವರ್ಷಗಳ ಹಿಂದೆ ಡಂಗುರ ಹೊಯಿಸಿ ಅಧ್ಯತೆಯಿಂದ ಸಾರಲಾಯಿತು. ಆದರೂ ನಮ್ಮ ಆ ಮನೋವೃತ್ತಿಯಲ್ಲಿ ಬದಲಾವಣೆಯಾಗಿರುವದಿಲ್ಲ. ಈ ರೀತಿ ಹೇಳಿಕೊಳ್ಳುವುದು ನಿರರ್ಥಕವೆಂದು ನಾನು ಆಗ ಇದೇ ವಿಶ್ವವಿದ್ಯಾಲಯದಲ್ಲಿ ಭಾಷಣ ಮಾಡುವಾಗ ಹೇಳಿದ್ದೆನು. ನನ್ನ ಹೇಳಿಕೆ ಸರಿಯಾಗಿತ್ತೆಂದು ಒಪ್ಪದಿದ್ದವರು ಈಗ ಬಹಳ ಕಡಮೆ ಜನರಿರುವರು. ಹಿಂದೀ ಸಮಸ್ಯೆಯ ಬಗ್ಗೆ ವಿಚಾರ ಮಾಡುವ ಈ ಸಮಯದಲ್ಲಿ, ಅದರ ಕೆಲ ಅಂಶಗಳನ್ನು ನಾವು ಬಿಡಿಸಬಹುದಾದರೂ ಅದನ್ನು ಇಡಿಯಾಗಿ ಬಿಡಿಸಬಲ್ಲೆವೆಂದು ಹೇಳಿಕೊಳ್ಳುವುದು ನಿರರ್ಥಕವಾಗಿದೆ. ಇಂದಿಗೂ ಆ ಬಗೆಯ ಮನೋವೃತ್ತಿ ನಮ್ಮಲ್ಲಿಲ್ಲೆಂಬುದು ಸ್ಪಷ್ಟವಿದೆ.

"ಸ್ವಾತಂತ್ರ್ಯ ಪೂರ್ವಗ್ರಹ- ನಾವು ಹೋರಾಡಲೇಬೇಕಾದ ಸ್ವಾತಂತ್ರ್ಯಗಳಲ್ಲಿ ಕನಿಷ್ಟವಲ್ಲ- ಇದಕ್ಕಾಗಿ ನಾವು ಇಂದು ಸರ್ವಸ್ವವನ್ನು ಸೂರೆ ಮಾಡುತಿರುವೆವು. ಆ ಬೆಲೆಯಲ್ಲಿಯ ಕೆಲ ಭಾಗ ಭೌತಿಕವಾಗಿದೆ— ನಮ್ಮ ಮಾನವೀ ಸಂಪತ್ತುಗಳನ್ನೆಲ್ಲ ಪೂರ್ಣವಾಗಿ ಉಪಯೋಗಿಸಿ ಕೊಳ್ಳಲು ನಾವು ಇಚ್ಛಿಸುತಿರುವದಿಲ್ಲಾದ್ದರಿಂದ ರಾಷ್ಟ್ರವೆಂಬ ದೃಷ್ಟಿಯಿಂದ ನಾವಿಂದು ಬಡವರಾಗಿರುವೆವು ಅಂತರ್‌ರಾಷ್ಟ್ರೀಯ ವರ್ಚಸ್ಸು ಮತ್ತು ಸದ್ಭಾವನೆಗಳ ನಾಶದಲ್ಲಿ ಉಳಿದ ಭಾಗವನ್ನು ನಾವು ಕೊಡುತಿರುವೆವು ಕಪಾಟನಲ್ಲಿ ನಾವು ನಮ್ಮ ಪೂರ್ವಗ್ರಹಗಳನ್ನು ಎರಡ ಯುವರ ಪರಿಶೀಲನೆಗೆ ದೊರಕದಂತೆ ಬಚ್ಚಿಡಲಾರೆವು. ಬೇರೆ ಬೇರೆ ರಾಷ್ಟ್ರಗಳು ಹೆಚ್ಚೆಚ್ಚಾಗಿ ನಮ್ಮ ಕಾರ್ಯಗಳನ್ನು ನಿರೀಕ್ಷಿಸುತಿರುವವು. ದಕ್ಷಿಣ ಆಫ್ರಿಕೆಯ ಧೋರಣಗಳು ಮತ್ತು ಮುಖ್ಯ ಮನೋವೃತ್ತಿ ಅಂತರ್‌ರಾಷ್ಟ್ರೀಯ ಒರೆಗಲ್ಲಿನ ಮುಟ್ಟಕ್ಕೆ ಮುಟ್ಟಿದಿದ್ದರಿಂದ ಬಹಳ ಕಷ್ಟಕೊಳಗಾಗಿದೆ. ನೈತಿಕ ಹಾನಿಯೆ ನಮ್ಮ ಮುಖ್ಯ ಹಾನಿ.

"ದಕ್ಷಿಣ ಆಫ್ರಿಕೆಯಲ್ಲಿನ ನಮ್ಮ ಧೋರಣವನ್ನು ನಿರ್ಧರಿಸುವಾಗ, ಯುರೋಪಿಯನ್‌ರು ಮತ್ತು ಇತರರೊಡನೆ ನಮ್ಮ ನೈತಿಕ ಸಂಬಂಧವನ್ನು ಬೇರೆ ಬೇರೆ ತಳಹದಿಯಿಂದ ನಿರ್ಧರಿಸುವಾಗ ಮತ್ತು ಮನುಷ್ಯನ ವರ್ಣಗಳಿಗನುಸಾರ ಬದಲಾಗುತಿರುವ ಕ್ರಿಶ್ಚನ್ ತತ್ವದ ಅರ್ಥ ಹಚ್ಚುವಾಗ ಎಲ್ಲಿಯ ವರೆಗೆ ನಾವು ಎರಡು ಮಾನದಂಡಗಳನ್ನು ಉಪಯೋಗಿಸುವೆವೊ ಅಲ್ಲಿಯ ವರೆಗೆ. ಅತ್ಮದಲ್ಲಿಯ ಒಂದು ದೋಷ ಎಂದು ಪ್ಲೇಟೊ ಕರೆಯಬಹುದಾಗಿದ್ದ ಕೊರತೆಯಿಂದ ನಾವು ಕೊರಗಬೇಕಾಗುವದು. ಮತ್ತು ನಾವು ಅನುಸರಿಸುತಿರುವ ಕ್ರಿಶ್ಚನ್ ತತ್ವವನ್ನು ಬಿಟ್ಟುಗೊಟ್ಟವಕ್ಕೆ ಇಸ್ಕರಟನ್‌ನ ಶಾಪಕ್ಕೂ ನಾವು ಒಳಗಾಗಬೇಕಾಗುವದು.

" ಮಾನವನ ಮನಸ್ಸಿನ ಮೇಲೆ ಯಾವದೇ ಬಗೆಯ ಒತ್ತಾಳಿಕೆ ನಡೆಸುವದರ ವಿರುದ್ಧ ಶಾಶ್ವತ ಭಾವನೆಯನ್ನು ತಳೆಯುವೆನು ಎಂದು ಪರಮಾತ್ಮನ ಸಮಕ್ಷದಲ್ಲಿ ನಾನು ಪ್ರತಿಜ್ಞೆ ಮಾಡಿರುವೆನು" ಎಂಬದಾಗಿ ಥಾಮಸ್ ಜೆಫರಸನ್‌ನನ ಗೂಡ ನಾವೂ ಪ್ರತಿಜ್ಞೆ ತಕ್ಕೊಳ್ಳಲು ಸಿದ್ಧರಾಗುವಾ " ಎಂದು ಒತ್ತಿ ಹೇಳಿ ಅವರು ತಮ್ಮ ಮಾತು ಮುಗಿಸಿರುವರು.

ಮಿತ್ರ ರಾಷ್ಟ್ರ ಸಮಿತಿಯ ಮುಂದೆ ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರ ಸಮಸ್ಯೆಯ ವಿಚಾರಣೆ ನಡೆವಾಗ ಈ ಭಾಷಣಕಾರರು ಮತ್ತು ಅವರ ಮುಂದಾಳಾದ ಜನರಲ್ ಸ್ಮಟ್ಸರು ಈ ಭಾವನೆಗಳನ್ನು ಮರೆಯಲಿಕ್ಕಿಲ್ಲ ಎಂದು ಅನಿಸುತ್ತೇವೆ.

ಹೊಸದಿಲ್ಲಿ — ಪ್ಯಾರೇಲಾಲ

ತಾ॥೧೩-೧೦-೪೬

## "ವನಸ್ಪತಿಯ" ಅಪಾಯ

"'ಹರಿಜನ'ದ ೧೪-೪-೧೯೪೬ ನೇ ತಾರೀ ತಾರೀಕಿನ ಸಂಚಿಕೆಯಲ್ಲಿ 'ವನಸ್ಪತಿ'ಯ ಮೇಲೆ ನಿರ್ಬಂಧ ಹಾಕಬೇಕೆಂಬ ಸರದಾರ ತಾರಾಸಿಂಗರ ಅಭಿಪ್ರಾಯಕ್ಕೆ ನೀವು ಬೆಂಬಲ ಕೊಟ್ಟಿರಿ. ಆ ಲೇಖದಲ್ಲಿ ಅನೇಕ ಸೂಚನೆಗಳು ಇದ್ದುವು. ಆ ಸೂಚನೆಗಳನ್ನು ಜಾರಿಯಲ್ಲಿ ತಂದಿದ್ದರೆ ಆ ಅಪಾಯಗಳನ್ನು ನಿಯಂತ್ರಿಸಬಹುದಾಗಿತ್ತು. ಆದರೆ ದುರ್ದೈವದಿಂದ ಯಾವದೇ ಬಗೆಯ ಉಪಾಯ ಕೈಕೊಳ್ಳಲಿಲ್ಲ. ಪಂಜಾಬ, ಅಕೋಲೆ, ಶೇಗಾಂವ ಮತ್ತು ಕರ್ನೂಲದಲ್ಲಿ ಹೊಸ ಕಾರಖಾನೆಗಳನ್ನು ಹೊರಡಿಸಲು ಅಪ್ಪಣೆ ಕೂಡ ಕೊಡಲಾಗಿದೆ. ಏನೇ ಆದರೂ ಇದಕ್ಕೆ ತಡೆ ಹಾಕಲಿಕ್ಕೆ ಬೇಕು. 'ವನಸ್ಪತಿ'ಗೆ ಬಣ್ಣ ಕೊಡಬೇಕೆಂದು ಕೂಡ ಪಂಜಾಬ ಸರಕಾರ ವಿಧಿಸಿದುವುದಿಲ್ಲ."

ನನಗೆ ಬಂದ ಪತ್ರದ ಸಾರವಿದು. 'ವನಸ್ಪತಿ' ಎಂಬದನ್ನು ಬೇಕೆಂತಲೆ ನಾನು ಅವತರಣ ಚಿನ್ಹದಲ್ಲಿ ಹಾಕಿರುವೆನು. ನಿಜವಾಗಿ ಅದು ವನಸ್ಪತಿ ತುಪ್ಪ ಎಂದು ಇರಬೇಕಾಗಿತ್ತು. ಹೂವಿನಗಿಡದ ಎಲೆಗಳು, ಹಣ್ಣುಗಳು ಮತ್ತು ಕಾಯಿಪಲ್ಲೆಗಳು ಎಂದು ಅರ್ಥವಾಗುವ ವನಸ್ಪತಿಯ ಬಗ್ಗೆ ಯಾರದೂ ಯಾವ ಆಕ್ಷೇಪವೂ ಇಲ್ಲ. ಆದರೆ ಬೇರೆ ಪದಾರ್ಥವೆಂದು ಅದು ಯಾವಾಗ ಎರಡನೆಯವರ ಕೈಗೆ ಹೋಗುವದೊ ಆಗ ಮಾತ್ರ ಅದು ವಿಷವಾಗುವದು. ವನಸ್ಪತಿಯ ತುಪ್ಪ ತುಪ್ಪವಲ್ಲ; ಎಂದೂ ಆಗದು. ಆದೆಂದಾದರೂ ತುಪ್ಪವಾಗಬಲ್ಲುದಾದರೆ ನಿಜವಾದ ತುಪ್ಪದ ಅವಶ್ಯಕತೆಯೇನೂ ಇಲ್ಲ ಎಂದು ಸಾರಿ ಹೇಳಲು ನಾನೇ ಮೊದಲಾಗುವೆನು. ತುಪ್ಪ ಇಲ್ಲವೆ ಬೆಣ್ಣೆ ಗೋವಿನ ಹಾಲಿನಿಂದ ತೆಗೆದ ಪದಾರ್ಥ. ವನಸ್ಪತಿ ಎಣ್ಣೆ ಇಲ್ಲವೆ ಬೆಣ್ಣೆಯನ್ನು ತುಪ್ಪದ ಸ್ವರೂಪದಲ್ಲಿ ಇಲ್ಲವೆ ಹೆಸರಿನಿಂದ ಮಾರುವದೆಂದರೆ ಹಿಂದೀ ಸಾರ್ವಜನಿಕರನ್ನು ಮೋಸಗೊಳಿಸಿದಂತೆಯೆ. ಅದು ಸಂಪೂರ್ಣವಾಗಿ ಅಪ್ರಾಮಾಣಿಕತೆ. ತುಪ್ಪ ಎಂದು ಹೇಳಿ ಈ ಪದಾರ್ಥವನ್ನು ಮಾರದಿರುವದು ವ್ಯಾಪಾರಸ್ಥರ ಸ್ಪಷ್ಟ ಕರ್ತವ್ಯವಾಗಿದೆ. ಯಾವ ಸರಕಾರವೂ ಈ ಬಗೆಯ ಮಾರಾಟವನ್ನು ಅನುಮೋದಿಸಲಾರದು. ಹಿಂದುಸ್ತಾನದಲ್ಲಿಯ ಕೋಟ್ಯವಧಿ ಜನರಿಗೆ ಇಂದು ಹಾಲು ಸಿಕ್ಕುವುದಿಲ್ಲ. ತುಪ್ಪ ದೊರೆಯುವದಿಲ್ಲ; ಬೆಣ್ಣೆ ಸಿಕ್ಕುವುದಿಲ್ಲ ಇಷ್ಟೇ ಅಲ್ಲ ಮಜ್ಜಿಗೆ ಕೂಡ ದೊರೆಯುವದಿಲ್ಲ. ಮರಣ ಸಂಖ್ಯೆಯ ಪ್ರಮಾಣ ಹೆಚ್ಚುತಿರುವಲ್ಲಿ ಆಶ್ಚರ್ಯವೇನೂ ಇಲ್ಲ. ಮತ್ತು ಜನತೆಯಲ್ಲಿ ಉತ್ಸಾಹದ ಕೊರತೆಯಿದೆ. ಮಾಂಸ ಇಲ್ಲವೆ ಹಾಲು ಮತ್ತು ಹಾಲಿನ ಪದಾರ್ಥಗಳಿಲ್ಲದೆ ಮನುಷ್ಯನು ಬದುಕುವದೇ ಶಕ್ಯವಿಲ್ಲೆಂದು ತೋರುತ್ತದೆ. ಈ ಸಂಬಂಧದಲ್ಲಿ ಜನತೆಯನ್ನು ವಂಚಿಸುವ ಅಥವಾ ಮೋಸವನ್ನು ಅನುಮೋದಿಸುವವನು ಹಿಂದುಸ್ತಾನದ ಶತ್ರು ಆಗಿರುವನು.

ಹೊಸದಿಲ್ಲಿ — ಮೋ. ಕ. ಗಾಂಧಿ

೬-೧೦-೪೬

## ಕರುಣಾಕೃತ್ಯ

ಅಜಾದ ಹಿಂದ ಸೈನಿಕನಾಗಿದ್ದ ಪಠಾಣನೊಬ್ಬನು ಈಗೊಂದು ಕಾರಖಾನೆಯಲ್ಲಿ ಕೆಲಸ ಮಾಡುತಿರುವನು. ೧೦ ವರುಷ ವಯಸ್ಸಿನ ಹುಡುಗನೊಬ್ಬನನ್ನು ಉಳಿಸಲು ಅವನು ಪ್ರಯತ್ನಿಸಿದನು. ಅವನ ಪ್ರಾರ್ಥನೆ ನಿರರ್ಥಕವಾಯಿತು. ದಾಳಿಗಾರರು ಆ ಹುಡುಗನನ್ನೂ ಪಠಾಣನನ್ನೂ ಕೂಡಿಯೆ ಇರಿದರು. ಹುಡುಗ ಸತ್ತನು. ಪಠಾಣನು ಬದುಕಿರುತ್ತಾನೆ. ಮರಣ ಹೊಂದಿದ ಹುಡುಗನ ತಂದೆಯು ಪಠಾಣನ ಶೌರ್ಯಕ್ಕಾಗಿ ೪೦೦೦ ರೂಪಾಯಿಗಳ ಪಾರಿತೋಷಕ ಕೊಡಬಯಸಿದನು. ತನ್ನ ಕರ್ತವ್ಯ ಮಾಡಲು ಪ್ರಯತ್ನಿಸಿದೆನೆಂದು ಹೇಳಿ ಆ ಪಠಾಣನು ಆ ಪಾರಿತೋಷಕವನ್ನು ನಿರಾಕರಿಸಿದನು ತೆಗೆದುಕೊಳ್ಳಲಿಲ್ಲ. ಇಂಥ ಉದಾಹರಣೆಗಳು ಹೆಚ್ಚುವವೋ ?

ಹೊಸದಿಲ್ಲಿ — ಮೋ. ಕ. ಗಾಂಧಿ

## ಗುಡ್ಡಗಾಡು ಪ್ರದೇಶಕ್ಕೆ ಜವಾಹರರ ಭೆಟ್ಟಿ

### ಲೀಗಿನವರ ಪುಂಡಾಟಿಕೆ

ನಡುಗಾಲ ಸರಕಾರದ ಪರರಾಷ್ಟ್ರ ಖಾತೆಯ ಮಂತ್ರಿಗಳಾದ ಪಂ. ಜವಾಹರಲಾಲರು ತಾ. ೧೬ ಕ್ಕೆ ದಿಲ್ಲಿಯಿಂದ ಗುಡ್ಡಗಾಡು ಪ್ರದೇಶದ ಪ್ರವಾಸಕ್ಕೆ ವಿಮಾನದಿಂದ ಹೊರಟು ಅಂದು ಮಧ್ಯಾನ್ಹ ಪೇಶಾವರ ವಿಮಾನ ನಿಲ್ದಾಣಕ್ಕೆ ಬಂದರು. [illegible] ದರು ಮುಖ್ಯಮಂತ್ರಿಗಳೂ ಇತರ ಮಂತ್ರಿಗಳೂ ಗವ್ಹರ್ನರರ ಕಾರ್ಯದರ್ಶಿಗಳೂ ಅವರನ್ನು ಸ್ವಾಗತಿಸಿದರು. ಲೀಗಿನ ಸುಮಾರು ೫೦೦೦ ಸ್ವಯಂ ಸೇವಕರು ಕರೆ ನಿಶಾನಿ ಭಾಲೆ ಬರ್ಚಿ ಸಹಿತ ಬಂದು ವಿರೋಧ ಪ್ರದರ್ಶಿಸಿದರಲ್ಲದೆ ಮುಖ್ಯ ಮಂತ್ರಿಗಳಾದ ಡಾ. ಖಾನಸಾಹೇಬ ಹಾಗು ಉಳಿದ ಮಂತ್ರಿಗಳ ಮೋಟಾರ ಮೇಲೆ ಕಲ್ಲು ಒಗೆಯುವದು ಉಗುಳುವದು ಮಾಡಿ ಗೊಂದಲ ಹಾಕಿದರು ಖಾನಸಾಹೇಬರ ಮೇಲೆ ಬರ್ಚಿ ಒಗೆದರು ಆದರೆ ಅದು ಅವರ ಸಮೀಪದಲ್ಲಿದ್ದ ಒಬ್ಬ ಪೋಲೀಸ ಅಧಿಕಾರಿಗೆ ತಾಕಿತು ಸುದೈವದಿಂದ ಯಾರಿಗೂ ಗಾಯವಾಗಲಿಲ್ಲ ಅಧಿಕಾರಿಯು ಪಿಸ್ತೂಲು ತೋರಿಸಲು ಅವರು ಹಿಂದೆ ಸರಿದರು.

ನಿಲ್ದಾಣದಿಂದ ಜವಾಹರಲಾಲರು ಡಾ. ಖಾನ ಸಾಹೇಬರ ಮನೆಗೆ ತೆರಳಿದರು ದಾರಿಯುದ್ದಕ್ಕೂ ಪೋಲೀಸ ಹಾಗು ಸೈನಿಕರ ಕಾವಲಿಡಲಾಗಿತ್ತು. ಲೀಗಿನವರು ಅಲ್ಲಿಯೂ ತೆರಳಿ ಜವಾಹರರೇ ತಿರುಗಿ ಹೋಗಿರಿ ಮೊದಲಾಗಿ ಕೂಗಿದರು. ಬೇರೆ ಯಾರಾದರೂ ನನ್ನ ಸ್ಥಳದಲ್ಲಿದ್ದರೆ ಈ ಕಿಡಿಗೇಡಿಗಳನ್ನು ಗೋಳಿಬಾರಿನಿಂದ ಚದುರಿಸುತ್ತಿದ್ದರು. ಹಿಂದೆ ಕೆಲವರು ಕೂತು ಇವರನ್ನು ಪ್ರಚೋದಿಸಿದ್ದರಿಂದ ನಾನು ಹಾಗೆ ಮಾಡುವದಿಲ್ಲ ಎಂದು ಡಾ. ಖಾನಸಾಹೇಬರು ಹೇಳಿದರು ಲೀಗಿನವರು ಹೀಗೆ ಗೊಂದಲ ಹಾಕಿದ್ದರಲ್ಲಿ ರಾಜಕೀಯ ಖಾತೆಯವರ ಕೈವಾಡವಿದೆ. ಜವಾಹರಲಾಲರ ಪ್ರವಾಸಕ್ಕೆ ಅವರು ವಿರುದ್ಧ ಇದ್ದರು. ಅವರ ಇಚ್ಛೆಯ ಧಿಕ್ಕರಿಸಿ ಜವಾಹರರು ಬಂದಿದ್ದರಿಂದ ಇದೆಲ್ಲ ಗೊಂದಲ ನಡೆದಿರುವದು ಎಂದು ಖಾನ ಅಬ್ದುಲ ಗಫರ ಖಾನರು ತಿಳಿಸಿದರು. ಜವಾಹರರ ಪ್ರವಾಸ ಕಾರ್ಯಕ್ರಮವು ಸುದ್ದಿ ಖಾತೆಯ ಮಂತ್ರಿಯಾದ ನನಗೆ ಸಹ ತಿಳಿದಿರದಿದ್ದರೂ ಲೀಗಿನವರಿಗೆ ಎಲ್ಲ ಕಾರ್ಯಕ್ರಮ ಗೊತ್ತಾದದ್ದು ರಾಜಕೀಯ ಖಾತೆಯವರು ಅವರೊಡನೆ ಸಂಚು ನಡಿಸಿದ್ದುದನ್ನೆ ತೋರಿಸುತ್ತದೆಂದು ಮೆಹರಚಂದ ಖನ್ನಾರವರು ಹೇಳಿದರು.

ಜವಾಹರಲಾಲರು ತಾ ೧೭ಕ್ಕೆ ಬೆಳಿಗ್ಗೆ ಉತ್ತರ ವಜಿರಸ್ತಾನದ ಮಿರಾನ ಶಹಾಕ್ಕೆ ಡಾ. ಖಾನ ಸಾಹೇಬ ಹಾಗು ಖಾನ ಅಬ್ದುಲ್ ಗಫರ ಖಾನರೊಂದಿಗೆ ಹೋಗಿ ಸಂಜೆಯಲ್ಲಿ ರಜಮುಕಕ್ಕೆ ತಲುಪಿದರು. ಅವರ ವಿಮಾನವು ಅಲ್ಲಿ ತಲುಪಲಿದ್ದ ಹೊತ್ತಿಗೆ ಇಪಿ ಫಕೀರನ ಲೆಫ್ಟನಂಟನೊಬ್ಬನು ೩೦ ಮಿಲಿಮಿಟರ ಗನ್ನಿನಿಂದ ಗುಂಡುಹಾರಿಸುತ್ತಿರುವದು ಕಂಡುಬಂತು. ಆದರೆ ಪಂಡಿತ ನೆಹರೂರವರು ಮೊದಲನೆ ವಿಮಾನದಲ್ಲಿ ಇರಲಿಲ್ಲ. ಅಲ್ಲದೆ ಅವರ ಆಗಮನಕ್ಕೂ ಈ ಗುಂಡುಹಾರಿಸುವಿಕೆಗೂ ಸಂಬಂಧವಿದ್ದಿಲ್ಲ. ಅದೇ ಸಮಯಕ್ಕೆ ಮೇಲೆ ಹಾರಾಡುತ್ತಿದ್ದ ಬ್ರಿಟಿಶ ವಿಮಾನವೊಂದು ಪ್ರತಿಯಾಗಿ ಗುಂಡು ಹಾರಿಸಿತು. ಪಂಡಿತ ನೆಹರೂರವರು ಬಂದ ಮೇಲೆ ರಜಮುಕ ಶಿಬಿರದ ಕಡೆಯಿಂದ ಒಂದೇ ಗುಂಡಿನ ಸಪ್ಪಳ ಕೇಳ ಬಂತು.

ರಜಮುಕ ನಗರದಲ್ಲಿ ಪಂ. ಜವಾಹರರು ಎರಡನೆ ಜಿರಗಾದವರನ್ನುದ್ದೇಶಿಸಿ ಭಾಷಣ ಮಾಡಿ ಪ್ರೀತಿಯಿಂದ ಭೆಟ್ಟಿಗೆ ಬಂದಿರುವದಾಗಿಯೂ ಆಳಲು ಬಂದಿರುವದಿಲ್ಲೆಂದೂ ಹೇಳಿದರು ಭಾಷಣ ನಡೆದಾಗ ಪಟ್ಟಣದ ಮೇಲೂ ಒಂದು ತರದ ಬಾಣವು ಎಸೆಯಲ್ಪಟ್ಟ ಸಪ್ಪಳವಾಯಿತು. ಗುಡ್ಡಗಾಡು ಜನರು ನೆಹರೂರವರಿಗೆ ಜಿನ್ನಾರವರೇ ತಮ್ಮ ಧುರೀಣರೆಂದು ತಿಳಿಸಿದರು ಸ್ವಲ್ಪ ಹೊತ್ತು ಚರ್ಚೆ ನಡೆಯಿತು. ಜವಾಹರರು ವಿನಂತಿಸಿದರೂ ಜಿರಗಾದವರ ತಮ್ಮ ಧೋರಣ ಬದಲಿಸಲಿಲ್ಲ. ಅವರ ಹೇಳಿಕೆ ಮಾತ್ರ ಶಾಂತರೀತಿ ಕೇಳಿಕೊಂಡರು.



## ವಾರದ ಪತ್ರ

### ಸರಕಾರಿ ಒಡೆತನ ವಿರುದ್ಧ ನಿಯಂತ್ರಣ

ಕಿಂಗ್ಸವೇಯಲ್ಲಿರುವ ಹರಿಜನ ವಸತಿಯಲ್ಲಿ ತಾ ೮, ೯, ೧೦ ಈ ದಿನಗಳಲ್ಲಿ ಜರುಗಿದ ಅ ಭಾ ಚರಖಾ ಸಂಘದ ವಾರ್ಷಿಕ ಸಭೆಯಲ್ಲಿ, ಈ ವರೆಗೆ ಕೇವಲ ಸಿದ್ಧಾಂತ ರೂಪದಲ್ಲಿದ್ದ ಅನೇಕ ವಿಷಯಗಳು ರಾಷ್ಟ್ರೀಯ ಸರಕಾರ ಸ್ಥಾಪನೆಯಾದಂದಿನಿಂದ ವ್ಯಾವಹಾರಿಕ ಸಾಧ್ಯಾಸಾಧ್ಯತೆಯ ಮಟ್ಟಕ್ಕೆ ಏರಿವೆಯೆಂಬ ಮಾತು ಸ್ಪಷ್ಟವಾಯಿತು. ಸುಮಾರು ೮೦ ಜನರು ಕಾರ್ಯಕ್ರಮದಲ್ಲಿ ಭಾಗಿಗಳಾಗಿದ್ದರು. ಚರ್ಚಿಸಲ್ಪಟ್ಟ ಪ್ರಶ್ನೆಗಳಲ್ಲಿ, ಕೆಲವೊಂದು ಪ್ರದೇಶದಲ್ಲಿ ಗಿರಣಿ ಬಟ್ಟೆಗೆ ಬಹಿಷ್ಕಾರ ಹಾಕಿ ಹೊಸ ಜವಳಿ ಗಿರಣಿಗಳ ಸ್ಥಾಪನೆಯನ್ನು ಪ್ರತಿಬಂಧಿಸುವದೂ ಒಂದಾಗಿತ್ತು. ಖಾದಿ ಯೋಜನೆಯ ಮೇಲಾಟ ಮಾಡಿ ಗಿರಣಿ ಬಟ್ಟೆ ಅದನ್ನು ಕೊಲ್ಲದಂತೆ ನೋಡಿಕೊಳ್ಳುವದೆ ಇದರ ಉದ್ದೇಶ. ಬಟ್ಟೆಯ ವಿಷಯದಲ್ಲಿ ಸ್ವಾವಲಂಬನೆಯನ್ನು ಸಾಧಿಸಲು ಪ್ರಯತ್ನ ಮಾಡಿ ನೋಡಬೇಕೆಂದು ಜನರು ಆಶಿಸುತಿರುವ ಪ್ರದೇಶಗಳಲ್ಲಿ ಗಿರಣಿ ಬಟ್ಟೆಗೆ ಪ್ರವೇಶ ದೊರೆಯದಂತೆ ಸರಕಾರ ನೋಡಿಕೊಳ್ಳಬೇಕೆಂದು ಗಾಂಧೀಜಿ ಸೂಚಿಸಿದ್ದರು. ಖಾದಿಯನ್ನು ಎಲ್ಲ ಕಡೆಯಲ್ಲಿಯೂ ಪ್ರಸಾರ ಮಾಡುವದು ನಿಜವಾಗಿ ಅವುಗಳ ಮನಸಿನಲ್ಲಿದ್ದರೆ ಹೊಸ ಜವಳಿ ಗಿರಣಿಗಳನ್ನು ಅವು ಸ್ಥಾಪಿಸಲೂ ಬಾರದು. ಬೇರೆಯವರಿಗೆ ಸ್ಥಾಪಿಸಲು ಅಪ್ಪಣೆಯನ್ನು ಕೊಡಕೂಡದು ಎಂದು ಅವರು ಪ್ರಾಂತಿಕ ಸರಕಾರಗಳಿಗೆ ಸಲಹೆಯಿತ್ತಿದ್ದರು. ಇತ್ತ ಹೊಸ ಗಿರಣಿಗಳಿಗಾಗಿ ಕೋಟ್ಯಂತರ ರೂಪಾಯಿ ವೆಚ್ಚಮಾಡಿ ಅತ್ತ ಹಳ್ಳಿಗರನ್ನು ಖಾದೀ ದೀಕ್ಷೆ ವಹಿಸಬೇಕೆಂದು ಕೇಳಿದರೆ ಫಲವಿಲ್ಲ. ಹಳ್ಳಿಗಾಡಿನ ಜನ ಬಹಳ ಧೂರ್ತರು. ನೀವು ಒಂದೆಡೆ ಬಟ್ಟೆಯಲ್ಲಿ ಸ್ವಾವಲಂಬನೆಯ ಶಾಸ್ತ್ರವನ್ನು ಹೇಳುತ್ತ ಅತ್ತ ಅದೇ ಪ್ರಾಂತದಲ್ಲಿ ಹೊಸ ಗಿರಣಿಗಳಿಗೆ ಅಪ್ಪಣೆಯಿತ್ತರೆ ಒಡನೆ ನಿಮ್ಮ ಉದ್ದೇಶವನ್ನೆ ಅವರು ಶಂಕಿಸುವರು.

ಸರಕಾರದವರು ಎಲ್ಲ ಹೊಸ ಗಿರಣಿಗಳನ್ನೂ ಈಗಿರುವವುಗಳನ್ನೂ ಆದಷ್ಟು ಬೇಗ ರಾಷ್ಟ್ರೀಕರಣ ಮಾಡಬೇಕೆಂದು ಕೇಳಿಕೊಳ್ಳುವ ಗೊತ್ತುವಳಿಯನ್ನು ಅ. ಭಾ ಚ. ಸಂಘದವರು ಮಾಡಬೇಕೆಂದು ಒಬ್ಬ ಸದಸ್ಯರು ಸೂಚನೆ ಕೊಟ್ಟರು. ಖಾದೀ ಪ್ರಸಾರವೂ ಹೊಸ ಗಿರಣಿಗಳ ಸ್ಥಾಪನೆಯೂ ಕೈ ಕೈ ಹಿಡಿದು ಸಾಗಲಾರವೆಂದು ನೀವು ಹೇಳುತ್ತಿರುವಾಗ ಹೊಸ ಜವಳಿ ಗಿರಣಿಗಳನ್ನು ರಾಷ್ಟ್ರೀಕರಣ ಮಾಡಬೇಕೆಂದು ಸರಕಾರವನ್ನು ಕೇಳಿಕೊಳ್ಳುವದು ಅಸಮಂಜಸವೆಂದು ವಿವರಿಸಿ ಗಾಂಧೀಜಿ ಆ ಸೂಚನೆಯನ್ನು ವಿರೋಧಿಸಿದರು. ಮದ್ರಾಸ ಪ್ರಾಂತದಲ್ಲಿ ಇನ್ನು ಹೊಸ ಗಿರಣಿಗಳು ಸ್ಥಾಪಿಸಲ್ಪಡಕೂಡದೆಂದು ಈಗಾಗಲೆ ಪ್ರಕಟಿಸಿದ್ದಾರೆ- ಈಗಿರುವ ಗಿರಣಿಗಳ ರಾಷ್ಟ್ರೀಕರಣವಾಗಬೇಕೆಂದು ಯಾರು ಬೇಡಿದರೂ ತೆಗೆದುಕೊಂಡು ಗಿರಣಿ ನಡೆಸುವ ಬದಲು ನಿಷ್ಠುರವಾದ ಸರಕಾರಿ ನಿಯಂತ್ರಣವೇ ಒಳಿತೆಂದು ತಾವು ಭಾವಿಸಿರುವದಾಗಿ ಗಾಂಧೀಜಿ ಹೇಳಿದರು. ಅಹಿಂಸೆಯಲ್ಲಿ ವಿಶ್ವಾಸವುಳ್ಳ ತಮಗೆ ವಿಶ್ವಸ್ತಿಕೆಯಲ್ಲಿ ನಂಬಿಕೆ ಹೆಚ್ಚೆಂದು ಅವರೆಂದರು. ಗಿರಣಿ ಒಡೆಯರನ್ನು ಶಾಂತ ರೀತಿಯಲ್ಲಿ ಮನವೊಲಿಸಿ ಅವರೂ ಅವರ ಕೂಲಿಕಾರರೂ ಸ್ವೇಚ್ಛೆಯಿಂದ ಸಾಮಾಜಿಕ ನಿಯಂತ್ರಣಕ್ಕೆ ಈಡಾಗುವಂತೆ ಮಾಡಬೇಕು. ಅಂದರೆ ಕ್ಷನು ಗಿರಣಿ ಒಡೆಯನಾಗಿ ಉಳಿಯಬಹದು. ಆದರೆ ಅವನು ತನ್ನ ಸೇವೆಗೆ ತಕ್ಕಂತೆ ಮತ್ತು ಜನತೆಯು ಮಾನ್ಯ ಮಾಡುವಷ್ಟು ಕಮಿಶನನ್ನು ಪಡೆದುಕೊಳ್ಳಬೇಕು. ಗಿರಣಿಗಳಲ್ಲಿ ದುಡಿಯುವ ಕೂಲಿಕಾರರೇ ನಿಜವಾದ ಒಡೆಯರಾಗುವರು. ಟಾಟಾ ಕಾರಖಾನೆಯೊಂದರಲ್ಲಿ ಕೂಲಿಕಾರರೂ ಅಲ್ಲಿಯ ಲಾಭಕ್ಕೆ ಪಾಲುಗಾರರಾಗಿದ್ದಾರೆಂದು ತಿಳಿಯುತ್ತದೆ. ಶ್ರೀ ಜೆ. ಆರ್. ಡಿ. ಟಾಟಾರು ಈ ವಿಷಯದಲ್ಲಿ ಮಾಡಿದ ಭಾಷಣವು ಗಮನಾರ್ಹವಾಗಿದೆ. ಇಂಥ ಉಪಾಯವೇ ಉತ್ತಮವಾದುದೆಂದು ಅವರು ಭಾವಿಸಿದ್ದಾರೆ. ಅಗತ್ಯವೆನಿಸಿದರೆ ಇಂಥ ಬೇಕಾದ ಯೋಜನೆಗಳಲ್ಲಿ ತಾವು ಸಹಕರಿಸುವದಾಗಿಯೂ ಗಿರಣಿ ಒಡೆಯರು ಅವರಿಗೆ ತಿಳಿಸಿದ್ದರು. ಜವಳಿ ಗಿರಣಿಯ ಉದ್ಯೋಗವನ್ನು ಸರಕಾರ, ಅ. ಭಾ. ಚರಖಾ ಸಂಘ ಮತ್ತು ಗಿರಣಿ ಒಡೆಯರು ಈ ಮೂವರ ನಿಯಂತ್ರಣಕ್ಕೆ ಒಪ್ಪಿಸುವ ವಿಚಾರವನ್ನು ಅವರು ಪ್ರಶಂಸಿಸಲಿಲ್ಲ. "ಗಿರಣಿಗಳನ್ನು ನಡೆಸುವದು ನಮ್ಮ ಉದ್ಯೋಗವಲ್ಲ. ಆದರೆ ಚಿಕ್ಕ ರಾಟೆಯನ್ನು ತಿರುಗಿಸುವದು ನಮ್ಮ ಕೆಲಸ. ನಮ್ಮ ಕಾರ್ಯಕ್ಷೇತ್ರದ ಹೊರಗಿರುವ ಸಂಗತಿಯ ಚರ್ಚೆಯಲ್ಲಿ ವೇಳೆಗಳೆಯುವದೇಕೆ? ಎಲ್ಲ ಗಿರಣಿಗಳು ಮುಚ್ಚಿದರೂ ನಾನು ಒಂದು ಹನಿ ಕಣ್ಣೀರಿಡಲಿಕ್ಕಿಲ್ಲ. ಗಿರಣಿಗಳು ಉತ್ಕರ್ಷ ಹೊಂದಿದರೆ ಖಾದಿಯು ಸಾಯಬೇಕಾಗುವದು. ಬಡವರ ಪರಿಹಾರಕ್ಕೆ ಪೂರಕ ಉದ್ಯೋಗವೆಂದು ಅದಿನ್ನೂ ಬಾಳಬಹುದು. ಆದರೆ ಅದಕ್ಕಾಗಿ ಚರಖಾ ಸಂಘದಂಥ ದೊಡ್ಡ ಸಂಸ್ಥೆಯ ಅಗತ್ಯವಿಲ್ಲ." ಗಿರಣಿಗಳ ಸಲಹೆಯಂತೆ, ಸಾಧ್ಯವಿದ್ದಷ್ಟು ಅವರ ಉಪದೇಶದಂತೆ ಸರಕಾರವು ಗಿರಣಿಗಳನ್ನು ನಿಯಂತ್ರಿಸಿದರೆ ಸಾಕು ಎಂದು ಹೇಳಿ ಮುಗಿಸಿದರು.

### ಸಹಾಯಧನದ ಪ್ರಶ್ನೆ

ಖಾದಿಗೆಸಹಾಯ ಧನಕೊಡುವ ವಿಷಯವನ್ನು ಚರ್ಚಿಸಲಾಯಿತು. ಕೈನೂಲನ್ನು ನೂಲುವದು ದಿನ ದಿನಕ್ಕೆ ಕಠಿನವಾಗತೊಡಗಿದೆ. ನೇಕಾರರು ಗಿರಣಿ ನೂಲನ್ನೇ ಬೇಡುತ್ತಾರೆ. ಈಗ ಸ್ವಾವಲಂಬನ ಖಾದಿಯು ಭಾರ ವೆನಿಸುವಷ್ಟು ನೇಯಿಗೆಯ ದರ ಬೆಳೆದಿದೆ. "ತಾವು ನೂತ ನೂಲಿನಿಂದ ಬಟ್ಟೆ ನೇಯಿಸಿ ಕೊಳ್ಳುವವರಿಗೆ ನೇಯಿಗೆಯ ದರದ ಭಾರ ಬೀಳದ ಹಾಗೆ ಸರಕಾರವು ಸಹಾಯಧನವನ್ನು ಕೊಡುವದು ಉಚಿತವಾಗಲಾರದೆ ?" ಎಂದು ಶ್ರೀ ಜಾಜೂಜಿಯವರು ಕೇಳಿದರು. ಇಂಥವರು ಸರಕಾರದಿಂದ ಸಹಾಯ ಧನವನ್ನು ಕೇಳದೆ ಹತ್ತಿ ಪೂರೈಕೆ, ನೂಲುವ ಕಲೆಯನ್ನು ಕಲಿಸಲು ತಜ್ಞರ ಸಹಾಯ ಮುಂತಾದವುಗಳನ್ನು ಕೇಳಬೇಕು ಎಂದು ಮಹಾತ್ಮರು ಹೇಳಿದರು. ತಲೆತಿರುಕರ ಲಹರಿಯಂತೆ ನಡೆದುಕೊಳ್ಳಲು ಸರಕಾರವು ಹಣ ವೆಚ್ಚಮಾಡುವಂತೆ ಚರಖಾ ಸಂಘವು ತನ್ನ ವರ್ಚಸ್ಸನ್ನುಪಯೋಗಿಸುತ್ತಿದೆಂದು ಯಾರೂ ಅನ್ನುವದು ಬೇಡ. ತನ್ನ ಗುಣಾವಗುಣಗಳಿಂದಲೆ ಉತ್ಕರ್ಷಾಪಕರ್ಷಗಳನ್ನು ಹೊಂದಬಲ್ಲ ಚರಖಾ ಸಂಘಕ್ಕೆ ಯಾರ ಅನುಗ್ರಹವೂ ಬೇಡವೆಂದು ನನ್ನ ಹೇಳಿಕೆ. ತನಗೆ ಕೊಟ್ಟದ್ದನ್ನು ಹತ್ತು ಪಟ್ಟಿನಿಂದ ಮುಟ್ಟಿಸುವ ಚರಖಾ ಸಂಘಕ್ಕೆ ಅದರ ಇಚ್ಛೆಯಂತೆ ಏನನ್ನೂ ಕೊಡಲಾಗಿಲ್ಲವೆಂದು ಎಲ್ಲರೂ ತಿಳಿಯುವಂತಾಗಲಿ.

### ಒತ್ತಾಯವಿಲ್ಲ

ಗಿರಣಿಯ ನೂಲು ಬೇಕಾದ ನೇಕಾರರು ಮೊದಲು ಇಂತಿಷ್ಟು ಕೈನೂಲನ್ನು ನೇದು ಕೊಡಬೇಕು. ನಂತರ ಅವರಿಗೆ ಗಿರಣಿ ನೂಲು ದೊರೆಯುವಂತಾಗಬೇಕು ಎಂದು ಇನ್ನೊಬ್ಬ ಸದಸ್ಯರು ಹೇಳಿದರು. ಯಾವದೇ ರೀತಿಯಿಂದ ನಡೆಸಿದ ಒತ್ತಾಯವು ಖಾದಿಯ ವಿಷಯದಲ್ಲಿ ಅನಾದರವನ್ನು ಹುಟ್ಟಿಸುವದು. ಹಾಗಾದಲ್ಲಿ ಅದು ಸ್ವಾತಂತ್ರ್ಯದ ಗುರುತಾಗಿ ಉಳಿಯಲಾರದು ಎಂದು ಮಹಾತ್ಮರು ಉತ್ತರಿಸಿದರು "ಸ್ವಾತಂತ್ರ್ಯದ ಗಾಳಿಬೀಸುತ್ತಿದೆ. ನೇಕಾರನೂ ನಿರ್ಬಂಧಕ್ಕೆ ಒಳಪಡಲು ಒಪ್ಪಲಿಕ್ಕಿಲ್ಲ."

"ಅನ್ನ ಬಟ್ಟೆ ಮುಂತಾದ ಎಲ್ಲ ವಿಷಯಗಳಲ್ಲಿಯ ನಿಯಂತ್ರಣವನ್ನು ಏಕೆ ಇಟ್ಟುಕೊಳ್ಳಬಾರದು? " ಎಂದರು ಜಾಜೂಜಿ.

"ನನಗೆ ಈ ವಿಚಾರ ಸೇರುವದಿಲ್ಲ" ಎಂದರು ಗಾಂಧೀಜಿ "ನೂಲುವವರನ್ನು ನಾವು ಒತ್ತಾಯಪಡಿಸುವದಿಲ್ಲ. ನೇಕಾರರನ್ನು ನಾವು ಒತ್ತಾಯಪಡಿಸಲಿಕ್ಕಾಗದು. ಈ ತೊಂದರೆಯ ಕಾರಣವನ್ನು ಹುಡುಕೋಣ. ನಾವು ನೇಕಾರಿಕೆಯನ್ನು ಅಲಕ್ಷಿಸಿ ನೂಲುವದನ್ನು ಪ್ರಾರಂಭಿಸಿದ್ದೇ ನಮ್ಮ ಮೊದಲನೆಯ ತಪ್ಪು. ನೂಲುವದ ಕೂಡ ನೇಯುವದವನ್ನೂ ನಾವು ಕೈಕೊಂಡಿದ್ದರೆ ಈ ತೊಂದರೆಯೆ ಹುಟ್ಟುತ್ತಿರಲಿಲ್ಲ. ಈಗ ನೇಕಾರರಿಗೆ ಅದಷ್ಟು ಕಡಿಮೆ ತೊಂದರೆಯಾಗುವಂತೆ ನೂಲನ್ನು ಸುಧಾರಿಸುವದೆ ಇದಕ್ಕೆ ಉಪಾಯ. ಕೇವಲ ಗಿರಣಿ ನೂಲನ್ನೇ ನಂಬಿಕುಳಿತರೆ ನಿಮ್ಮ ಉದ್ಯೋಗ ಹಾಳಾಗುವದು ಎಂದು ನಾವು ನೇಕಾರರಿಗೆ ಬಿಂಬಿಸಿ ಹೇಳಬೇಕು. ಗಿರಣಿ ಒಡೆಯರೇನೂ ಪ್ರಾಣಿದಯಾಪರರಲ್ಲ. ಕೈಮಗ್ಗದ ಬಟ್ಟೆಯು ಗಿರಣಿ ಬಟ್ಟೆಯೊಡನೆ ಸ್ಪರ್ಧಿಸ ತೊಡಗಿದ ಕೂಡಲೆ ಅವರು ಕೈಮಗ್ಗದವರ ಕುತ್ತಿಗೆಯ ಸುತ್ತಲಿನ ಉರಲನ್ನು ಬಿಗಿಯಾಗಿಸ ತೊಡಗುವರು.

"ಚರಖಾದಲ್ಲಿ ನಮಗೆ ವಿಶ್ವಾಸವಿದ್ದರೆ ಈ ತಾತ್ಪೂರ್ತಿಕ ತೊಂದರೆಗಳನ್ನೆಲ್ಲ ಎದೆಗುಂದದೆ ಎದುರಿಸಿ ಮುಂದೆ ಸಾಗಬೇಕು. ಕೈನೂಲನ್ನು ನೇಯುವ ಮಗ್ಗಗಳ ಸಂಖ್ಯೆ ಕ್ರಮೇಣ ಹೆಚ್ಚುವದು. ನಮಗೆ ಬೇಕಾಗುವಷ್ಟು ಬಟ್ಟೆಯನ್ನು ನೇಯುವ ನೇಕಾರರೂ ಚಾತುರಿಯೂ ನಮ್ಮಲಿದೆ. "

### ಗಜಗತಿ ?

ಜಾಜೂಜಿ — ಅಂದರೆ ಕೆಲಸವು ಮೊದಲಿನಂತೆಯೆ ಗಜಗತಿಯಿಂದ ಸಾಗಬೇಕು ಎಂದಂತಾಯಿತು. ಅಲ್ಪಾವಧಿಯಲ್ಲಿಯೆ ಬಟ್ಟೆಯ ವಿಷಯದಲ್ಲಿ ನಾಲ್ಕು ಲಕ್ಷ ಜನರು ಸ್ವಾವಲಂಬಿಗಳಾಗಿರಬೇಕೆಂಬ ನಮ್ಮ ಯೋಜನೆಯು ಇದರಿಂದ ಸಿದ್ಧಿಸುವದಿಲ್ಲ.

ಗಾಂಧೀಜಿ— ಅದು ಯಶಸ್ವಿಯಾಗದಿದ್ದರೆ ನಮ್ಮದೇ ಪ್ರಮಾದ.

ಜಾಜೂಜಿ— ಹಾಗೆಂದು ಹೇಳಬಹುದು ಆದರೆ ಪರಿಸ್ಥಿತಿಯೂ ಕಾರಣವಾಗುತ್ತದೆ.

ಗಾಂಧೀಜಿ— ತೊಂದರೆಗಳನ್ನು ಮೀರುವನೂ ಮಾನವನ ಅಧಿಕಾರ. ನಿಸರ್ಗದ ವಿಜಯವು ನಮ್ಮ ಇಂದಿನ ಯುಗದ ಗೀತವಾಗಿಲ್ಲವೆ ? ಕೇವಲ ಪರಿಸ್ಥಿತಿಗಳೆ ಘಟನೆಗಳ ಪರಿಣಾಮಗಳನ್ನು ನಿರ್ಣಯಿಸಬಲ್ಲವಾದರೆ ಜರ್ಮನಿ, ಜಪಾನಗಳು ಯುದ್ಧವನ್ನು ಗೆಲ್ಲುತ್ತಿದ್ದವು ಪರಾಭವವನ್ನು ಒಪ್ಪದಿರುವ ಆಂಗ್ಲರಿಂದ ನಾವು ಈ ವಿಷಯದಲ್ಲಿ ಪಾಠಕಲಿತುಕೊಳ್ಳೋಣ. ನಾವು ಜೀವನದಲ್ಲಿ ಸಂಯಮವನ್ನೂ ತತ್ಪರತೆಯನ್ನೂ ಹೆಚ್ಚಿಸಿಕೊಳ್ಳಬೇಕಾಗಿದೆ. ತತ್ಪರಶಕ್ತಿಗೆ ಸಾಧಿಸದಿದ್ದ ವಸ್ತುವಾವದೂ ಈ ಜಗತ್ತಿನಲ್ಲಿಲ್ಲ.

### ಅನಧಿಕೃತ ಖಾದಿ ವಿರುದ್ಧ ಗಿರಣಿ ಬಟ್ಟೆ

" ನಾವು ಸದಾ ಪ್ರಾಮಾಣಿಕರಾಗಿರಬೇಕೆಂದು ನೀವು ಕಲಿಸಿದ್ದೀರಿ. ಖಾದಿ ಧಾರಣೆಗೆ ಇದ್ದ ಕರಾರುಗಳನ್ನು ಪೂರ್ಣಗೊಳಿಸಿದರೆ ಅನಧಿಕೃತ ಖಾದಿಯನ್ನು ಹಾಕಿಕೊಂಡು ಖಾದೀಧಾರಿಎಂದು ಹೇಳಿಕೊಳ್ಳುವದು ಅಪ್ರಾಮಾಣಿಕವಲ್ಲವೆ ? ಅದಕ್ಕಿಂತ ಪ್ರಾಮಾಣಿಕ ತನದಿಂದ ಗಿರಣಿ ಬಟ್ಟೆಯನ್ನು ಉಪಯೋಗಿಸುವದು ಒಳಿತಲ್ಲವೆ " ಎಂದು ಒಬ್ಬ ಸದಸ್ಯರು ಕೇಳಿದರು.

ಅನಧಿಕೃತ ಖಾದಿಯನ್ನು ನಾನು ಒಪ್ಪುವದಿಲ್ಲ. ಆದರೆ ಶುದ್ಧ ಖಾದಿಯು ಯಾವಾಗಲೂ ಗಿರಣಿ ಬಟ್ಟೆಗಿಂತ ಮೇಲು ಎಂದು ನನ್ನ ಅಭಿಪ್ರಾಯವೆಂದು ಮಹಾತ್ಮರು ಉತ್ತರಿಸಿದರು. ಉದಾಹರಣೆಗಾಗಿ ತಮಗೆ ಮತ್ತು ತಮ್ಮ ಕುಟುಂಬದವರಿಗಾಗಿ ನೂತು ಬಟ್ಟೆ ನೇಯಿಸಿಕೊಳ್ಳುವವರಿಗೂ ಅಧಿಕೃತ ಖಾದಿಯನ್ನು ಕೊಡುತ್ತಿರುವದಿಲ್ಲ. ಆದರೂ ಇಂಥ ಖಾದಿ ಅತ್ಯಂತ ಶ್ರೇಷ್ಠವಾದದು. ಅಧಿಕೃತ ಖಾದಿಯೆಂದರೆ ನೂಲುವವರಿಗೆ ಕನಿಷ್ಠ ವೇತನವನ್ನು ಕೊಡಲಾಗಿದೆ ಎಂಬ ಬಗ್ಗೆ ಅ. ಭಾ. ಚರಖಾ ಸಂಘದವರು ನಿರ್ಣಯಿಸಿದ ದರದಂತೆ ನೇಕಾರರಿಗೆ ಕೂಲಿಯನ್ನು ಕೊಡದಿದ್ದರೂ ಖಾದಿಯು ಗಿರಣಿ ಬಟ್ಟೆಗಿಂತ ಶ್ರೇಷ್ಠವಾದದ್ದು. ಗಿರಣಿಗಳಲ್ಲಿ ಕೂಲಿಕಾರರಿಗೆ ಕೊಡುವ ಕೂಲಿಯು ತೋರಿಕೆಗೆ ಮಾತ್ರ ಹೆಚ್ಚಾಗಿರುತ್ತದೆ. ಗಿರಣಿ ಬಟ್ಟೆಯು ಖಾದಿಗಿಂತ ೨॥ ಪಟ್ಟು ಅಗ್ಗವಿದೆ. ಗಿರಣಿಗಳಿಗೆ ಇಂದು ದೊರೆಯುತ್ತಿರುವ ಅನೇಕ ಸೌಕರ್ಯಗಳು ದೊರೆಯದಿದ್ದರೆ ಗಿರಣಿ ಬಟ್ಟೆಯು ಖಾದೀಬಟ್ಟೆಗಿಂತ ಅಗ್ಗವಾಗಿ ದೊರೆಯಲಾರದೆಂದು ತಜ್ಞರು ನನಗೆ ಹೇಳಿದ್ದಾರೆ. ಉದಾಹರಣೆಗಾಗಿ ಗಿರಣಿಗಳಿಗೆ ಬೇಕಾಗುವ ಕಚ್ಚಾ ಮಾಲನ್ನು ಅಲ್ಲಿ ದೊಡ್ಡ ಪ್ರಮಾಣದಿಂದ ತಯಾರಾದ ಸರಕುಗಳನ್ನು ಸಾಗಿಸಲು ಗಿರಣಿಯವರಿಗೆ ಅಗ್ಗದ ಸಾರಿಗೆ ಸೌಕರ್ಯ ಒದಗಿಸಲಾಗುತ್ತಿದೆ. ಉದ್ದ ಎಳೆಯ ಹತ್ತಿಯನ್ನು ಬೆಳೆಯುವದಕ್ಕಾಗಿ ಸಂಶೋಧನ ನಡೆಸಲು ಅನೇಕ ಸಂಶೋಧನ ಸಂಸ್ಥೆಗಳನ್ನು ಲಕ್ಷಾವಧಿ ರೂ. ಗಳನ್ನು ವೆಚ್ಚಮಾಡಿ ಕಟ್ಟಿಸಲಾಗಿದೆ. ಭಾರತದ ೭ ಲಕ್ಷ ಹಳ್ಳಿಗಳಿಗಾಗಿ ಯಾರೂ ಏನನ್ನೂ ಮಾಡಿಲ್ಲ. ಆದ್ದರಿಂದ ಇಂದು ಗಿರಣಿಗಳಿಗೆ ಒಂದಿಲ್ಲೊಂದು ರೂಪದಿಂದ ಸಹಾಯ ದೊರೆಯುತ್ತಿದೆ. ಈ ಸಹಾಯವನ್ನೆಲ್ಲ ನಿಲ್ಲಿಸಿದಿರಿ ನಂತರ ಗಿರಣಿ ಬಟ್ಟೆಯು ಖಾದಿಗಿಂತ ಅಗ್ಗವಾಗುವದೊ ಎಂಬುವದನ್ನು ನೋಡಿರಿ.

ಅನಧಿಕೃತ ಖಾದಿಯನ್ನು ನಾನು ಪುರಸ್ಕರಿಸಲಾರೆ ಆದರೆ ಗಿರಣಿ ಬಟ್ಟೆ ಸಂಪೂರ್ಣ ಹೋಗಬೇಕು ಎಂದು ಗಾಂಧೀಜೀ ಮುಂದೆ ಸಾಗಿದರು. ಅ. ಭಾ. ಚರಖಾ ಸಂಘವು ಮನ್ನಣೆ ಚೀಟಿಗಳನ್ನು ಕೊಡುವದನ್ನು ನಿಲ್ಲಿಸಿಬಿಡುವ ದಿನವೂ ಬರಬಹುದು. ಆಗ ಬೇಕಾದವರು ಖಾದಿ ಮಾರಾಟಮಾಡಬಹುದು. ಖಾದಿಯು ಸಾರ್ವತ್ರಿಕವಾದಾಗ ಅದು ಅನಿವಾರ್ಯವಾಗುವದು. ಆಗ ಚರಖಾ ಸಂಘವು ಖಾದಿಯ ಸಾಮಾನ್ಯ ಧೋರಣೆ ಮತ್ತು ಶಾಸ್ತ್ರದ ಮೇಲ್ವಿಚಾರಕವಾಗಿ ಉಳಿಯಬಹುದು. ಅದರ ವ್ಯಾಪಾರಿ ಚಟುವಟಿಕೆಗಳು ನಿಲ್ಲುವವು. ಜನರು ಸ್ವಭಾವತಃ ಪ್ರಾಮಾಣಿಕರಾಗಬೇಕಲ್ಲದೆ ಖಾದೀ ಉತ್ಪಾದಕರೂ ಮಾರಾಟಗಾರರೂ ಪ್ರಾಮಾಣಿಕರಾಗುವಂತೆ ನೋಡಿಕೊಳ್ಳಬೇಕು; ಶುದ್ಧ ಖಾದಿಯೆ ದೊರೆಯುವಂತೆ ಹೆಣಗಬೇಕು.

"ಖಾದಿ ಮತ್ತು ಚರಖಾಗಳು ಅಹಿಂಸೆಯ ಗುರುತುಗಳೆಂದು ನಾನು ಹೇಳಿದ್ದೇನೆ. ಆದರೆ ಅಧಿಕೃತ ಖಾದೀ ಭಾಂಡಾರಗಳಲ್ಲಿಯೂ ಅಪ್ರಾಮಾಣಿಕತೆ ಕಂಡು ಬರುತ್ತದೆಂದು ಹೇಳಲಾಗುತ್ತಿದೆ. ಇದು ನಿಜವಾಗಲಾರದೆಂದು ನಾನು ನಂಬಿದ್ದೇನೆ. ಆದರೆ ಕೆಲವರ ವಿಷಯದಲ್ಲಿ ಇದು ನಿಜವಾದುದೆಂಬುದನ್ನು ಅಲ್ಲಗಳೆಯುವಂತಿಲ್ಲ.

"'ವನಸ್ಪತಿ ತುಪ್ಪವು' ತುಪ್ಪವಲ್ಲದ್ದರಿಂದ ನಾನು ಆ ಶಬ್ದಕ್ಕೆ ಆಕ್ಷೇಪವೆತ್ತಿದ್ದೇನೆ. ವನಸ್ಪತಿ ಎಣ್ಣೆಯೆಂದು ಅದಕ್ಕೆ ಹೆಸರಿಡಬೇಕು. ಅದರಂತೆಯೆ ಖಾದಿಯಲ್ಲದ ಅಂದರೆ ಕೈನೂಲಿನ ಕೈಮಗ್ಗದ್ದಾಗಿರದ ಬಟ್ಟೆಯನ್ನು ಖಾದಿಯೆಂದು ನಾನು ಒಪ್ಪಲಾರೆ. ಅಂತಿಮ ಉಪಾಯವು ಗಿರಾಕಿಗಳಲ್ಲಿಯೆ ಇದೆ. 'ಗಿರಾಕಿಗಳೇ ಎಚ್ಚರಿಕೆ' ಎಂಬುದನ್ನು ಅವರು ಮರೆಯದಿರಲಿ."

### ಕಠಿಣವಾದ ಒರೆಗಲ್ಲು

ನನ್ನ ವಿಚಾರದಂತೆ ಸಾರ್ವಜನಿಕ ಜೀವನವು ಕಠಿಣವಾದ ಒರೆಗಲ್ಲಾಗಿದೆಯಲ್ಲದೆ ಅತ್ಯುಚ್ಚ ಆಧ್ಯಾತ್ಮಿಕ ಗುಣಗಳನ್ನು ಮಾನವನಲ್ಲಿ ಬಿತ್ತುವ ಪರೀಕ್ಷಾದೇಶಿಯೂ ಆಗಿದೆಂದು ಮಹಾತ್ಮರು ಒಂದು ಭಾಷಣದಲ್ಲಿ ಹೇಳಿದರು. ಅದು ಎಂಥ ಕಠಿಣ ಒರೆಗಲ್ಲೆಂಬುದು ಕಳೆದ ವಾರ ಒಂದು ಸೂಕ್ಷ್ಮ ವಿಷಯದಲ್ಲಿ ಅವರು ಸಮ್ಮತಿಸೂಚಕವಾಗಿ ಗೋಣು ಅಲ್ಲಾಡಿಸಿದಾಗ ಅವರ ಮತ್ತು ನಮ್ಮೆಲ್ಲರ ಪ್ರತ್ಯಯಕ್ಕೆ ಬಂದಿತು. ಅಗತ್ಯವಿಲ್ಲದೆ ಒಂದು ಪ್ಯಾರಾವನ್ನು ಗಡಿಬಿಡಿಯಿಂದ ಓದಲಾಯಿತು. ಅದು ಸರಿಯಾಗಿದ್ದಿಲ್ಲವಾದರೂ ಮಹಾತ್ಮರು ಸರಿಯಾಗಿದೆಂದು ಭಾವಿಸಿದರು. ಆದರೆ ತಪ್ಪು ಕೂಡಲೆ ಕಂಡುಹಿಡಿಯಲ್ಪಟ್ಟು ಯಾವ ಪ್ರಮಾದವೂ ಸಂಭವಿಸಲ್ಲ. ಆದರೂ ಈ ಘಟನೆ ಅವರನ್ನು ಬಹಳವಾಗಿ ನೋಯಿಸಿತು. ಅವರ ಜೀವಮಾನದಲ್ಲಿಯೆ ಹೀಗಾದದ್ದು ಮೊದಲನೆಯ ಸಲ. ೭೮ ನೇ ವಯಸ್ಸಿನಲ್ಲಿ ವೃದ್ಧಾಪ್ಯವು ಬಂದೊದಗಿತೆ? ಎಂದು ಅವರು ನುಡಿದರು. ತಮ್ಮ ವಿವೇಕದೆಮುರು ತಮ್ಮನ್ನು ತಾವೇ ದೂಷಿಸಿಕೊಂಡರಲ್ಲದೆ ಸಾರ್ವಜನಿಕ ಮನುಷ್ಯನ ಜೀವನದಲ್ಲಿ ಇಂಥ ಅಲಕ್ಷತನವೊಂದು "ಅಪರಾಧವೆಂದು" ಹೇಳಿದರು. ಅಷ್ಟಕ್ಕೇ ಅವರಿಗೆ ಸಮಾಧಾನವಾಗದೆ ಸಾಯಂಪ್ರಾರ್ಥನೆಯ ಸಭೆಯಲ್ಲಿಯೂ ಅವರು ತಮ್ಮ ತಪ್ಪನ್ನು ಒಪ್ಪಿಕೊಂಡರು.

—೧೧ನೇ ಪುಟಕ್ಕೆ

## ಪ್ರಶ್ನೆ—ಪೆಟ್ಟಿಗೆ

### ವೇಷ ಸಾಮ್ಯವು ಉಪಾಯವೆ?

ಕಳೆದ ನಾಲ್ಕು ವಾರಗಳಲ್ಲಿ ನಾನು ನೋಡಿದ ರಕ್ತಪಾತ ಮತ್ತು ಗುಂಡಿನ ಮಳೆಯಿಂದ ನನಗೆ ಬಹಳ ವೇದನೆಯಾಗಿದೆ. ದೊಂಬಿ ಶುರುವಾದಂದಿನಿಂದ ಮ್ಯಾಜಿಸ್ಟ್ರೇಟನೆಂದ ನಾನು ಶಾಂತಿ ರಕ್ಷಣೆಯ ಕೆಲಸ ಮಾಡುತಿರುವೆನು. ಪ್ರತಿಯೊಬ್ಬ ಹಿಂದೀ ಮನುಷ್ಯನು ಒಂದೇ ಬಗೆಯ ರಾಷ್ಟ್ರೀಯ ಉಡುಪನ್ನು ಧರಿಸಬೇಕೆಂದು ಹಿಂದಿನಕ್ಕಿಂತ ಈಗ ನನಗೆ ಹೆಚ್ಚು ಮನವರಿಕೆಯಾಗಹತ್ತಿದೆ. ಹಿಂದೆಯು ನಾನು ಈ ವಿಷಯವನ್ನು ತೆಗೆದಿದ್ದೆ. ಆದರೆ ನೀವು ಈ ವಿಚಾರಕ್ಕೆ ಅಷ್ಟೊಂದು ಮನ್ನಣೆ ಕೊಡಲಿಲ್ಲೆಂಬುದು ನಿಮ್ಮ ನೆನಪಿನಲ್ಲಿರಬಹುದು. ಕೇವಲ ಶರ್ಟು ಮತ್ತು ಪ್ಯಾಂಟನ್ನು ಧರಿಸಿದ ಯಾವನೊಬ್ಬನೂ ಏಕೆ ಇರಿಯಲ್ಪಡುವದಿಲ್ಲೆಂಬದರ ಕಾರಣವೇನು? ಉಡುಪಿನಿಂದಲೆ ಮನುಷ್ಯನ ಧರ್ಮ ಗೊತ್ತಾಗುವದೆಂಬುದು ಇದಕ್ಕೆ ಸಾಕಷ್ಟು ನಿದರ್ಶನವಾಗಿದೆ. ನೀವು ಹರಿಜನದಲ್ಲಿ ಈ ಬಗ್ಗೆ ಬರೆದರೆ ಒಂದೇ ಬಗೆಯ ಉಡುಪನ್ನು ಧರಿಸುವದರಿಂದ ಬೇಗನೆ ಜಾತೀಯ ದೊಂಬಿಗಳು ನಿಲ್ಲುವವೆಂಬವಾಗಿ ಭಾವಿಸಿದ ನನಗೆ ಮತ್ತು ನನ್ನಂಥವರಿಗೆ ಬಹಳ ಸಹಾಯಕವಾಗುವದು."

ಒಬ್ಬ ಪಂಡಿತ, ಸದ್ಭಾವನೆಯುಳ್ಳ ಸದ್ಗೃಹಸ್ಥರಿಂದ ಬಂದ ಈ ಪತ್ರವನ್ನು ನಾನು ಪ್ರಸಿದ್ಧಿಸುತ್ತೇನೆ. ಈ ಮೂರು ಗುಣಗಳು ಕೂಡಿದರೂ ನಿಃಸಂದಿಗ್ಧ ವಿಚಾರಗಳು ಹೊರಡುವವೆಂದು ಹೇಳಲಿಕ್ಕೆ ಬರಲಾರದು. ವೇಷೈಕ್ಯದಿಂದ ಉದ್ದಿಷ್ಟ ಸಫಲವಾಗದು. ಅದಕ್ಕೆ ಹೃದಯಸಮ್ಮಿಲನ ಅವಶ್ಯವಾಗಿದೆ. ವೇಷೈಕ್ಯದಿಂದ ನಮ್ಮ ಸಂಕಷ್ಟಗಳು ಮಾಯವಾಗುವವೆಂದು ಹೇಳುವದು ಎಷ್ಟೊಂದು ಜೊಳ್ಳು ಜೊಳ್ಳಾಗಿದೆಂಬುದನ್ನು ನೋಡಬೇಕಾದರೆ ನಾವು ಯುರೋಪದ ರಾಷ್ಟ್ರಗಳತ್ತ ನೋಡಿದರೆ ಸಾಕು. ದ್ವೇಷವು ಕೆಟ್ಟ ಗಾಳಿಯಂತಿದೆ. ಅದೆಲ್ಲ ಮಾಯವಾಗಿ ನವೀನ ಮತ್ತು ಅನುಕೂಲ ಸದ್ಭಾವನೆಯುಂಟಾಗಲಿಕ್ಕೆ ಬೇಕು.

### ಸೇದುವ ದುಶ್ಚಟ

ಪ್ರಶ್ನೆ— ಮದ್ಯಪಾನ ಪ್ರತಿಬಂಧದ ಬಗ್ಗೆ ನೀವು ಅನೇಕ ಸಲ ಒಳ್ಳೆ ಕಟುವಾಗಿ ಬರೆದಿರುವಿರಿ, ಆದರೆ ಸೇದುವದರ ಬಗ್ಗೆ ಅಷ್ಟೊಂದು ಹೆಚ್ಚು ಸಲ ಇಲ್ಲವೆ ಅಷ್ಟು ತೀಕ್ಷ್ಣ ಶಬ್ದಗಳಲ್ಲಿ ನೀವು ಅಷ್ಟೊಂದು ಸ್ಪಷ್ಟವಾಗಿ ಹೇಳಿಲ್ಲ. ಈ ದುಶ್ಚಟವು ಅಪಾಯಕಾರಕ ರೀತಿಯಲ್ಲಿ ಬೆಳೆಯುತ್ತ ನಡೆದಿದೆ; ಸಣ್ಣ ಮಕ್ಕಳು ಕೂಡ ಈ ದುಶ್ಚಟಕ್ಕೆ ಬಲಿಯಾಗಹತ್ತಿರುವರು. ಸೇದುವದರಿಂದ ನಿಜವಾಗಿ ಹಾಳಾಗುತ್ತಿರುವ ಕೋಟ್ಯವಧಿ ರೂಪಾಯಿಗಳನ್ನು ನಮ್ಮೀ ಬಡ ರಾಷ್ಟ್ರದಲ್ಲಿ ಜಾಣತನದಿಂದ ಉಪಯೋಗಿಸಬಹುದಾಗಿದೆ.

ಉತ್ತರ:— ಈ ಆಣಕವು ನಿಜವಿದೆ. ಆದರೆ ಹೊಸದಲ್ಲ. ಸೇದುವ ಚಟವು ಅಷ್ಟೊಂದು ಮನ್ನಣೆಯ ಸ್ಥಾನವನ್ನು ಪಡೆದುದೆ ಇದರ ವಿರುದ್ಧ ಅಷ್ಟೊಂದು ಒತ್ತಿ ಹೇಳದಿರುವದಕ್ಕೆ ಕಾರಣವೆಂದು ಹೇಳಬಹುದು. ಯಾವದೊಂದು ದುಷ್ಟ ಚಟವು ಆ ಮಟ್ಟನ್ನು ಮುಟ್ಟಿದರೆ ಅದನ್ನು ಕಿತ್ತೊಗೆಯುವದು ಕಠಿನವಾಗುವದು. ಹೀಗೆ ಹೇಳಿದ ಕೂಡಲೆ ಈ ಪೀಡೆಯನ್ನು ನಾಶಗೊಳಿಸಲು ನಾವು ಚಳವಳಿ ಮಾಡಬಾರದೆಂದಲ್ಲ. ಅದನ್ನು ಹೇಗೆ ಮಾಡಬೇಕು ಮತ್ತು ಯಾವಾಗ ಮಾಡಬೇಕೆಂಬುದು ಸಮಸ್ಯೆಯಾಗಿದೆ. ಇದಕ್ಕೆ ಉತ್ತರ ಕೊಡುಲು ನಾನು ಅಸಮರ್ಥನಾಗಿರುವೆನೆಂದು ಒಪ್ಪಲು ನನಗೆ ವಿಷಾದವಾಗುತ್ತದೆ.

### ವರದಕ್ಷಿಣೆಯ ಶಾಪ

ಪ್ರಶ್ನೆ— ಮದುವೆಯ ಪೇಟೆಯಲ್ಲಿ ವರದಕ್ಷಿಣೆಯ ಬೇಡಿಕೆ ಬೆಳೆಯಹತ್ತಿದೆ. ಈ ಅನ್ಯಾಯದಿಂದ ಯಾರೂ ಮುಕ್ತರಾಗಿಲ್ಲ. ವರನ ತಂದೆ ಶ್ರೀಮಂತ ಇದ್ದ ಮಟ್ಟಿನಲ್ಲಿ ವರದಕ್ಷಿಣೆ ಹೆಚ್ಚೆಚ್ಚಾಗುತ್ತ ಹೋಗುತ್ತದೆ. ಉಪವರರಾದ ಅನೇಕ ಕನ್ಯೆಯರ ಮದುವೆಯಾಗದ್ದರಿಂದ ಅವರ ತಂದೆ ತಾಯಿಗಳ ಸ್ಥಿತಿಯನ್ನು ವರ್ಣಿಸಲು ಕೂಡ ಬಾರದಂತಹದಾಗಿದ ಇದೇ ಸದ್ಯದ ಸಮಸ್ಯೆ. ಜನತಾ ಸರಕಾರಗಳು ಕಾಯದೆಯಿಂದ ಈ ಕೇಡನ್ನು ನಿಯಂತ್ರಿಸಹಾಯ ಮಾಡಬಹುದಾಗಿದೆ.

ಉತ್ತರ:— ಇದೊಂದು ವಿಚಿತ್ರ ಸಂಗ. ಶಿಕ್ಷಣದಿಂದ ಪರಿಸ್ಥಿತಿ ಸುಧಾರಿಸುವದಿಲ್ಲ. ಇಷ್ಟೆಅಲ್ಲ ಅದು ಮತ್ತಷ್ಟು ಕೆಡುವದು. ತಮ್ಮತೀರ ಅಶಕ್ತತೆಯಿಂದ ನಾಚಿಕೆಯಿಲ್ಲದೆ ಈ ಕಾಟಕ್ಕೀಡಾದ ವರ್ಗದವರು, ಅದು ಆ ವರ್ಗವನ್ನೆ ಹಾಳು ಮಾಡುವ ಮೊದಲು ಎಚ್ಚರಾಗಬೇಕು. ಅವಿಶ್ರಾಂತ ಮತ್ತು ಅವಿರತ ಚಳವಳಿಯನ್ನು ಅವರು ಸಾಗಿಸಬೇಕು. ಇದರ ಹೊರತು ಬೇರೆ ಮಾರ್ಗ ನನಗೆ ತೋರದಾಗಿದೆ.

ಹೊಸದಿಲ್ಲಿ ಮೋ. ಕ. ಗಾಂಧಿ
೧೨-೧೦-೪೬

### ಈ ಗೌಪ್ಯವೇಕೆ ?

ಪ್ರಶ್ನೆ— ಬಂಧು-ಬಂಧುಗಳಲ್ಲಿ ಪರಸ್ಪರ ಹತ್ಯಾಕಾಂಡ ನಡೆದಿರುವಾಗ ಆಯಾ ಜಾತಿಗಳ ಜನರ ಹೆಸರನ್ನು ಪ್ರಸಿದ್ಧ ಮಾಡಬಾರದೇಕೆಂಬುದನ್ನು ನೀವು ಹೇಳುವಿರೊ ?

ಉತ್ತರ— ಈ ಪ್ರಶ್ನೆ ಅನೇಕಸಲ ನನಗೂ ಹೊಳೆದಿದೆಂದು ನಾನು ಒಪ್ಪಬೇಕಾಗಿದೆ. ಈ ಮೌನ ಧೋರಣಕ್ಕೆ ಬೇರೆ ಯಾವ ಕಾರಣ ನನಗೆ ತೋರುವದಿಲ್ಲ, ಆಳರಸರು ಬಿಟ್ಟುಹೋದ ಅದಾಯವಿದೆಂದು ಹೇಳಬಹುದು. ರಾಷ್ಟ್ರೀಯ ಸರಕಾರಗಳು ಇದನ್ನು ಸ್ಥಾನಭ್ರಷ್ಟ ಮಾಡಿರುವವೆಂದು ಆಶಿಸುವಾ. ಯಾರು ಯಾರನ್ನು ಇರಿಯುವರೆಂಬುದು ಯಾರಿಗೆ ಗೊತ್ತಾಗಬಾರದೊ ಅವರಿಗೆ ಗೊತ್ತೆ ಆಗುವದು. ಯಾರಿಗೆ ಆ ಹೆಸರು ತಿಳಿಯಬೇಕೊ ಅವರು ಮಾತ್ರ ಅಂಧಃಕಾರದಲ್ಲಿರಿಸಲ್ಪಡುವರು. ತಮ್ಮ ತಮ್ಮ ಧರ್ಮಗಳ ಏಕನಿಷ್ಠ ಸೇವಕರಾಗಿರುವಾಗಲೆ ಹಿಂದೀಯರು ತಾವೆಂದು ಹೇಳಿಕೊಳ್ಳುವಲ್ಲಿ ಅಭಿಮಾನಪಡುವ ಹಿಂದು ಮುಸಲ್ಮಾನ ವ ತ್ತು ಉಳಿದ ಜಾತಿಯ ಜನರು ಇರುವರೆಂಬುದು ನನಗೆ ನಿಶ್ಚಿತವಾಗಿ ಗೊತ್ತಾಗಿದೆ. ಮತ್ತು ಇಂಥ ಕಿಡಿಗೇಡಿತನವನ್ನು ಮಾಡುವ ತಮ್ಮ ಧರ್ಮಾಂಧ ಬಾಂಧವರ ಮನಸನ್ನು ಒಲಿಸಬಯಸುವವರೂ ಇರುವರು. ಇಂಥ ಅನೇಕರ ಪರಿಚಯು ನನಗಿದೆ. ಪತ್ರಿಕೆಗಳ ಮುಖಾಂತರವಾಗಿಯಲ್ಲದೆ ಬೇರೆ ಮಾರ್ಗದಿಂದಲೂ ಅವರಿಗೆ ಸಂಗತಿಗಳು ಗೊತ್ತಾಗವು. ರಹಸ್ಯವೆಲ್ಲ ಬಯಲಿಗೆ ಬರಲಿ. ಬೇಗನೆ ಅದು ಮಾಯವಾಗುವದು.

ಹೊಸದಿಲ್ಲಿ ಮೋ. ಕ. ಗಾಂಧಿ
೧೨—೧೦—೧೯೪೬

### ತಪ್ಪು

ಅನೇಕ ಸ್ಥಳಗಳಲ್ಲಿಯ ಕಾಂಗ್ರೆಸ್ಸಿಗರು ಗಾಂಧಿಜಯಂತಿ ಉತ್ಸವಕ್ಕಾಗಿ ನಿಧಿ ಸಂಗ್ರಹಿಸಿದರೆಂದು ಮದ್ರಾಸದಿಂದ ಪತ್ರ ಲೇಖಕರೊಬ್ಬರು ಬರೆಯುತ್ತಾರೆ. ಜನರು ಮುಕ್ತಹಸ್ತದಿಂದ ಧನ ಸಹಾಯ ಮಾಡಿದರು. ಆದರೆ ಆ ಹಣವನ್ನು ಹೇಗೆ ವೆಚ್ಚ ಮಾಡಲಾಯಿತೆಂಬ ಲೆಕ್ಕ ಪತ್ರವನ್ನು ಪರಿಶೋಧಕರಿಂದ ತಪಾಸು ಮಾಡಿಸಿಲ್ಲ, ಮತ್ತೂ ಆ ಹಣವೆಂತು ವೆಚ್ಚ ಮಾಡಲ್ಪಟ್ಟಿತೆಂಬುದನ್ನೂ ಜನ ಅರಿಯರು.

ಇದು ನಿಜವಿದ್ದರೆ ಸಂಪೂರ್ಣ ತಪ್ಪು. ಕಾಣಿಕೆಯೆಂದು ಕೊಡಲಾದ ಹಣವೆಲ್ಲ ಸಾರ್ವಜನಿಕರದು ಇಂಥ ಹಣವೆಲ್ಲ ಸಾರ್ವಜನಿಕರ ವಿಶ್ವಸ್ತ ನಿಧಿಯೆಂದು ಗಾಂಧಿಜಿ ಮೇಲಿಂದ ಮೇಲೆ ಹೇಳುತ್ತ ಬಂದಿರುವರು. ಅದನ್ನು ಜೋಕೆಯಿಂದ ಇಟ್ಟುಕೊಂಡು ಸಾರ್ವಜನಿಕರ ಕಲ್ಯಾಣ ಕಾರ್ಯದಲ್ಲಿ ವ್ಯಯ ಮಾಡಬೇಕು. ಪ್ರತಿಯೊಂದು ಪೈಯ ಲೆಕ್ಕವನ್ನು ಕೂಡ ಇಡಬೇಕೆಂದು ಬೇರೆ ಹೇಳುವ ಅವಶ್ಯಕತೆ ಇಲ್ಲ.

ಹೊಸದಿಲ್ಲಿ ಅ. ಕೌ.
ತಾ೧೧-೧೦-೪೬ (ಹಿಂದುಸ್ಥಾನಿ ಯಿಂದ)

## ವಾರದ ಪತ್ರ

(೯ನೇ ಪುಟದಿಂದ)

### ತಪ್ಪು ಒಪ್ಪಿಕೊಳ್ಳುವದರ ಮಹತ್ವ

"ತಪ್ಪು ಒಪ್ಪಿಕೊಳ್ಳದೆ ದಿನವನ್ನು ಹೋಗಗೊಡಬಾರದು ಎಂಬ ನಾಣ್ಣುಡಿಯನ್ನು ನಾನು ಸದಾ ಅನುಸರಿಸಿದ್ದೇನೆ. ತಪ್ಪೆಸಗದಿರುವದು. ಯಾವ ಮಾನವನಿಗೂ ಸಾಧ್ಯವಿಲ್ಲ. ಮಾಡಿದ ತಪ್ಪನ್ನು ಮುಚ್ಚಿ ಅದನ್ನು ಮರೆಸುವದಕ್ಕಾಗಿ ಪುನಃ ಸುಳ್ಳು ಹೇಳುತ್ತ ಹೋಗುವದರಲ್ಲಿಯೆ ಗಂಡಾಂತರವಿದೆ. ಹುಣ್ಣು ಕೀವಾದಾಗ ನೀವದನ್ನು ಹೀಚಿಬಿಡುವದರಿಂದ ಅದರ ವಿಷವೆಲ್ಲ ಇಲ್ಲದಂತಾಗಿ ಗುಣವಾಗುವದು. ಆದರೆ ಆ ವಿಷವು ಒಳಗಿಂದೊಳಗೆ ಹರಡಹತ್ತಿದರೆ ನಿಶ್ಚಿತವಾಗಿಯೂ ಮರಣ ಸಂಭವಿಸುವದು. ಕೆಲ ವರ್ಷಗಳ ಹಿಂದೆ ಸಾಬರಮತಿ ಆಶ್ರಮದಲ್ಲಿ ಮೈಲಿಬೇನೆ ಪ್ರಾರಂಭವಾಗಿತ್ತು. ಮೈಲಿ ಎದ್ದವರೆಲ್ಲ ಉಳಿದುಕೊಂಡರು. ಆದರೆ ಒಬ್ಬನ ಮೈಮೇಲೆ ಮಾತ್ರ ಅವು ಕಾಣಿಸಲಿಲ್ಲ. ಅವನ ದೇಹವೆಲ್ಲ ತಪ್ತವಾಗಿ ಕೆಂಪಾಗಿ ಅವನು ಮಡಿದು ಹೋದ. ಪಾಪಪ್ರಮಾಣಗಳ ವಿಷಯದಲ್ಲಿಯೂ ಅಷ್ಟೇ. ಮಾಡಿದ ತಪ್ಪನ್ನಾಗಲಿ ಪಾಪವನ್ನಾಗಲಿ ಕೂಡಲೆ ಒಪ್ಪಿಕೊಳ್ಳುವದೆಂದರೆ ಅದನ್ನು ಹೊರದೂಡಿದಂತೆಯೆ.

"ನನ್ನ ಜೀವನದ ರೂಢಿಯಂತೆ ನಾನು ತಪ್ಪು ಮಾಡಿದ ಕೂಡಲೆ ನನ್ನ ಗೆಳೆಯರೆದುರು ಒಪ್ಪಿಕೊಂಡೆ" ಎಂದು ಮಹಾತ್ಮರು ಮುಂದುವರಿದರು. ಆದರೂ ಅದನ್ನು ಇಡೀ ಜಗತ್ತಿನ ಜನರೆದುರಿಗೆ ಸ್ಪಷ್ಟವಾಗಿ ಆಡಿತೋರಿಸಿದ ಹೊರತು ನನಗೆ ಸಮಾಧಾನವಿಲ್ಲ. ಇದೇನೂ ಪಾಪವಲ್ಲ, ಚಿಕ್ಕ ತಪ್ಪು ಅಲಕ್ಷದಿಂದಾದುದು ಎಂದು ನನ್ನ ಗೆಳೆಯರು ಹೇಳಬಹುದು. ತಪ್ಪು ಪಾಪಗಳಲ್ಲಿ ನಾನು ಭೇದವೆಣಿಸುವದಿಲ್ಲ. ಒಬ್ಬನು ತಿಳಿದೂ ತಿಳಿದೂ ತಪ್ಪನ್ನಾಚರಿಸಿ ಪಶ್ಚಾತ್ತಪ್ತ ಹೃದಯದಿಂದ ದಯಾಮಯನಾದ ದೇವನಲ್ಲಿ ಅದನ್ನು ತೋಡಿಕೊಂಡರೆ ಆ ದೇವನು ಅವನ ತಪ್ಪನ್ನು ತೊಳೆದು ಬಿಡುವನು. ನಾನು ತಿಳಿದ ಮಾಡಿದ ತಪ್ಪಿನಿಂದ ಯಾರಿಗಾದರೂ ಅಪಾಯವಾದ ಒಂದೇ ಒಂದು ಉದಾಹರಣೆ ನನ್ನ ಈ ದೀರ್ಘ ಜೀವಮಾನದಲ್ಲಿ ನಾನು ಕಂಡಿಲ್ಲ."

"ಅದಕ್ಕಾಗಿ ನಾನು ಯಾವ ತಪಶ್ಚರ್ಯ ಮಾಡಲಿ?" ಎಂದು ಗಾಂಧೀಜಿಯವರು ತಮ್ಮ ಆತ್ಮವನ್ನು ಪ್ರಶ್ನಿಸಿ ಹೀಗೆ ಉತ್ತರಿಸಿದರಂ. "ಪುನಃ ಆ ತಪ್ಪನ್ನು ಮಾಡದಂತೆ ನಿರ್ಧಾರಮಾಡುವದು. ಪಾಪಕ್ಷಾಲನೆಗೆ ಇದೊಂದೆ ಮಾರ್ಗ."

### ಮರಣಶಯ್ಯೆಯ ಪ್ರಾಯಶ್ಚಿತ್ತ

"ಇಚ್ಛೆಯಿದ್ದರೆ ತನ್ನ ಉದ್ಧಾರವನ್ನು ಮಾಡಿಕೊಳ್ಳಲು ಬಾರದಷ್ಟು ಮನುಷ್ಯನೆಂದಿಗೂ ಪತಿತನಾಗುವದಿಲ್ಲವೆಂಬ ನಾಣ್ಣುಡಿಯೊಂದು ಇಂಗ್ಲಿಷಿನಲ್ಲಿದೆ. ಪಾಪಕೂಪದಲ್ಲಿ ಮನುಷ್ಯನೆಷ್ಟೇ ಆಳವಾಗಿ ಇಳಿದಿದ್ದರೂ ದೇಹತ್ಯಾಗದ ಸಮಯದಲ್ಲಿ ಕೂಡ ಅವನು ತನ್ನ ತಪ್ಪುಗಳನ್ನು ಒಪ್ಪಿಕೊಂಡು ಪಶ್ಚಾತ್ತಾಪದಗ್ಧನಾದರೆ ದೇವರು ಅವನನ್ನು ಕ್ಷಮಿಸುವನೆಂಬ ಭರವಸೆ ನಮಗಿದೆ. ಮುಂದಿನ ಜನ್ಮದಲ್ಲಿ ನನ್ನ ನಂಬಿಕೆ ಇದೆ. ಜನ್ಮಜನ್ಮಾಂತರದಲ್ಲಿ ಕರ್ಮವು ಬೆನ್ನತ್ತಿ ಬರುವದೆಂಬುದನ್ನೂ ಒಪ್ಪುತ್ತೇನೆ. ನಾವು ಇಲ್ಲಿ ಬಿತ್ತಿದ್ದನ್ನು ಎಲ್ಲಿಯಾದರೂ ಬೆಳೆದುಕೊಳ್ಳದೆ ಗತ್ಯಂತರವಿಲ್ಲ. ಆದರೆ ಯಾವನೊಬ್ಬನು ತನ್ನ ಮರಣಶಯ್ಯೆಯಲ್ಲಾದರೂ ಪಾಪಗಳನ್ನೊಪ್ಪಿಕೊಂಡು ಪಶ್ಚಾತ್ತಾಪ ಪಟ್ಟರೆ ಅವನ ಪಾಪಗಳೆಲ್ಲ ನಿರ್ಮೂಲವಾಗಿ ಯಾವ ಅಪಾಯವೂ ಆಗದು ನಾನು ಇಂಥ ತಪ್ಪನ್ನು ಇನ್ನೊಮ್ಮೆ ಎಂದಿಗೂ ಮಾಡಬಾರದೆಂದು ನನಗಾಗಿ ದೇವರಲ್ಲಿ ಪ್ರಾರ್ಥಿಸಿರಿ"

ನೀವೆಲ್ಲ ನಿಮ್ಮ ಕೃತಿಗಳಲ್ಲಿ ಅವಸರ ಅಲಕ್ಷ್ಯಗಳನ್ನು ತೋರಬಾರದೆಂಬ ಪಾಠವನ್ನು ನನ್ನ ಈಗಿನ ಉದಾಹರಣೆಯಿಂದ ಕಲಿತುಕೊಳ್ಳುವಿರೆಂದು ಆಶಿಸಿದ್ದೇನೆ. ತಪ್ಪು ಒಪ್ಪಿಕೊಂಡಿದ್ದರಿಂದ ನನ್ನ ಮೇಲಿನ ಭಾರವಿಳಿದಂತಾದರೂ ೧೨೫ ವರ್ಷ ಬಾಳಬೇಕೆಂಬ ನನ್ನ ವಿಶ್ವಾಸವು ಅತಿಯಾಗಿ ಕದಡಿದಂತಾಗಿದೆ. ಆ ಆತ್ಮವಿಶ್ವಾಸ ಪುನಃ ಉಂಟಾಗಲು ಕೆಲಕಾಲ ಹಿಡಿದೀತು.

ಅಂತರ್ನಿರೀಕ್ಷಣೆಗಾಗಿ ಮತ್ತು ಶಕ್ತಿ ಸಂಚಯಕ್ಕಾಗಿ ಅವರು ಸಾಮಾನ್ಯ ವಿಷಯಗಳಲ್ಲೆಲ್ಲ ಅನಿಯಮಿತ ಮೌನವನ್ನೇ ವಹಿಸಿದ್ದಾರೆ. ಸಾಯಂ ಪ್ರಾರ್ಥನೆಯ ಸಭೆಯಲ್ಲಿ ಮತ್ತು ಮಾತಾಡಲೇ ಬೇಕಾದ ಇತರ ಅವಶ್ಯಕ ಸಂದರ್ಭಗಳಲ್ಲಿ ಅವರು ಮೌನವನ್ನು ಮುರಿಯುತ್ತಾರೆ.

### ಅವರ ಮೌನ ಪ್ರಾರ್ಥನೆ

ಅವರ ಮೌನದಾಳವನ್ನು ತುಂಬಿರುವದೇನು ? ಇಂದು ಸಾಯಂ ಸಭೆಯಲ್ಲಿ ಓದಲಿಕ್ಕೆಂದು ಸೋಮವಾರದ ಸಂದೇಶವನ್ನು ಬರೆದು ಕೊಟ್ಟಾಗ ಆ ಮೌನದಾಳದ ನೋಟ ಸ್ವಲ್ಪ ಕಂಡಿತು. "ದೇವರು ನಿರ್ಮಿಸಿದ ಎಲ್ಲ ಜೀವಿಗಳ ಹಿತವನ್ನೇ ಮನುಷ್ಯನು ಅಸ್ಥೆಯಿಂದ ಚಿಂತಿಸಬೇಕಲ್ಲದೆ ಆ ಸಾಮರ್ಥ್ಯವನ್ನು ಕೊಡೆಂದು ದೇವರಲ್ಲಿ ಪ್ರಾರ್ಥಿಸಬೇಕು. ಎಲ್ಲರ ಹಿತಚಿಂತನೆಯಲ್ಲಿಯೆ ತನ್ನ ಹಿತವೂ ಅಡಗಿದೆ. ಆದರೆ ತನ್ನ ಇಲ್ಲವೆ ತನ್ನ ಪಂಗಡದ ಹಿತವನ್ನು ಗಮನಿಸುವವನು ಸ್ವಾರ್ಥಿಯಾಗುವನು ಅವನಿಗೆ ಎಂದಿಗೂ ಹಿತವಾಗುವದಿಲ್ಲ." ತಾನು ಒಳ್ಳೆಯದೆಂದು ನಂಬಿದ್ದಾವುದು ಮತ್ತು ನಿಜವಾಗಿಯೂ ಒಳ್ಳೆಯದಾವುದು ಎಂಬುದನ್ನು ಮನುಷ್ಯನು ಕಂಡು ಹಿಡಿಯುವದು ಅಗತ್ಯವಾಗಿದೆಂದು ಗಾಂಧೀಜಿಯವರು ಹೇಳಿದರು.

### ಹೇರಳ ಸುಗ್ಗಿ

ಅರ್ಧ | ೭೯೯೯ ವರೆಗೆ ನಡೆದು ಕಳೆದ ಶನಿವಾರ ಮುಗಿದ ಶ್ರೀ. ಕನು ಗಾಂಧಿಯವರ ಮೂರನೆ ನೂಲುವ ವರ್ಗದ ಪರಿಣಾಮವು ಒಂದು ಸೂತಕವಾದರೆ ಬೆಳೆಯೇನೊ ಬೇಕಾದ ಹಾಗಿದೆ.; ಕೊಯ್ಯುವವರು ಕಡಿಮೆಯೆಂದು ಹೇಳಬೇಕಾಗುವದು.

ಈ ವರ್ಗಕ್ಕೆ ಹೆಚ್ಚು ಜನರನ್ನು ಸೇರಿಸಿಕೊಳ್ಳಬಾರದೆಂದು ನಿರ್ಧರಿಸಿದ್ದರಿಂದ ೨೨ ಮಹಿಳೆಯರೂ ೨೮ ಗಂಡಸರೂ ಈ ವರ್ಗಕ್ಕೆ ಸೇರಿದ್ದರು. ಬೇರೆ ಎರಡು ಕಡೆಗಳಲ್ಲಿ ನಡೆದ ನೂಲುವ ವರ್ಗಗಳಿಂದ ಜನರು ಇಲ್ಲಿಗೆ ಪರೀಕ್ಷೆ ನೋಡಲು ಬಂದದ್ದೊಂದು ಈ ಸಲದ ಪರೀಕ್ಷೆಯ ವೈಶಿಷ್ಟ್ಯ. ಇವುಗಳಲ್ಲಿ ಒಂದು ವರ್ಗವು ಹರಿಜನ ಮಹಿಳೆಯರಿಗಾಗಿ ಇತ್ತು. ೨೦ ಹರಿಜನ ಮಹಿಳೆಯರು ಬಂದಿದ್ದರು. ಇವರಲ್ಲಿ ೭ ಜನರು ಪರೀಕ್ಷೆಗೆ ಕಟ್ಟಿದರು. ಇನ್ನೊಂದು ವರ್ಗದಲ್ಲಿ ೧೨ ಮಹಿಳೆಯರಿಗೆ ಶಿಕ್ಷಣಕೊಡಲಾಯಿತು. ಇವರಲ್ಲಿ ಮೂವರು ಪರೀಕ್ಷೆಗೆ ಬಂದಿದ್ದರು. ೧। ತಾಸು ನಡೆದ ಪರೀಕ್ಷೆಯಲ್ಲಿ ನೂಲುವ ವರೆಗಿನ ಎಲ್ಲ ವಿಧಾನಗಳ ಪರೀಕ್ಷೆ ನಡೆಯಿತು. ಪರಿಣಾಮವಿಂತಿದೆ.

ಎಲ್ಲರೂ ಎಲ್ಲ ವಿಧಾನಗಳಲ್ಲಿ ಉತ್ತೀರ್ಣರಾದರಲ್ಲದೆ ೨೨ ಜನರು ೫೦ ಎಳೆಗಳನ್ನೂ ೯ ಜನರು ೮೦ ಎಳೆಗಳನ್ನು ೪ ಜನರು ೧೦೦ ಎಳೆಗಳನ್ನೂ ನೂತರು. ನೂಲಿನ ನಂಬರು ೧೨ ರಿಂದ ೩೦ ವರೆಗೆ ಇತ್ತು.

ಇಡೀ ಶಿಕ್ಷಣವನ್ನು ಪಡೆದವರಲ್ಲಿ ಮುಂಬಯಿ ಕ್ರಾನಿಕಲದ ಮಿ. ನಾರ್ಮನ ಕ್ಲಿಫ ಮತ್ತು ಮಿ. ಫ್ರೀಮನ ಇವರಿದ್ದಾರೆ. ಇವರಿಬ್ಬರೂ ನೆಲದ ಮೇಲೆ ಕುಳಿತು ತಾವೇ ತಯಾರಿಸಿದ ಹಂಜಿಯಿಂದ ಚನ್ನಾದ ನೂಲು ತೆಗೆಯಲು ಕಲಿತರು. ಇವರಿಬ್ಬರೂ ಚರಖಾಗಳನ್ನು ಕೊಂಡು ಕೊಂಡಿದ್ದು ನೂಲುವ ಚಟವನ್ನು ಬಿಟ್ಟುಕೊಡುವದಿಲ್ಲವಾಗಿ ಆಶಿಸುತ್ತಾರೆ.

ಭಂಗಿ ವಸತಿಯಲ್ಲಿ ಇನ್ನೂ ನೂಲುವ ವರ್ಗಗಳನ್ನು ಪ್ರಾರಂಭಿಸಲಾಗುವದಿಲ್ಲ. ಆದರೆ ಈ ಕಲೆಯನ್ನು ಕಲಿತವರು ತಮ್ಮ ಪ್ರದೇಶದಲ್ಲಿ ವರ್ಗಗಳನ್ನು ಪ್ರಾರಂಭಿಸುತ್ತಿದ್ದಾರೆ. ೯ ನೇ ವಾರ್ಡಿನ ಜಿಲ್ಲಾ ಸಮಿತಿಯು ಚರಖಾ ಕ್ಲಬ್ಬನ್ನೂ ಇದೇ ೧೬ನೇ ತಾರೀಗೆ ನೂಲುವ ವರ್ಗವನ್ನೂ ಪ್ರಾರಂಭಿಸುವದು.

ಹೊಸದಿಲ್ಲಿ ಪ್ಯಾರೇಲಾಲ
೧೫-೧೦-೪೬

### ಧಾರವಾಡ

ಧಾರವಾಡದಲ್ಲಿ ಸ್ಥಾಪಿತವಾಗಲಿರುವ ಒಕ್ಕಲತನ ಕಾಲೇಜಿನಲ್ಲಿಯ ೩೦ ವಿದ್ಯಾರ್ಥಿಗಳಿಗೆ ವಸತಿಯ ಏರ್ಪಾಡು ಮಾಡುವುದಾಗಿ ಶ್ರೀ ಮುರುಘಾರಾಜೇಂದ್ರ ಸ್ವಾಮಿಗಳು ವಾಗ್ದಾನ ಕೊಟ್ಟಿದ್ದಾರೆ. ಸವಣೂರ ನವಾಬಸಾಹೇಬರು ೧೦ ಸಾವಿರ ರೂಪಾಯಿ ಕೊಡುವದಾಗಿ ವಾಗ್ದಾನವಿತ್ತಿರುವರೆಂದು ತಿಳಿಯುತ್ತದೆ.

ಹುಬ್ಬಳ್ಳಿಯಲ್ಲಿ ವಾಣಿಜ್ಯ, ಕಾಲೇಜನ್ನು ತೆರೆದಿದ್ದಾದರೆ ೧ ಲಕ್ಷ ರೂಪಾಯಿ ಕೊಡುವದಾಗಿ ಶ್ರೀ ಮೂರು ಸಾವಿರಮಠದ ಶ್ರೀಗಳು ವಾಗ್ದಾನ ಮಾಡಿರುವದಾಗಿ ವಿಶ್ವಸನೀಯವಾಗಿ ತಿಳಿಯುತ್ತದೆ.

ಇದೇ ೨೭ ನೇ ತಾರೀಕಿಗೆ ಖಾನಸಾಹೇಬ ಸಂಗೀತ ರತ್ನ ಅಬ್ದುಲ್ ಕರೀಮಖಾನರ ಪುಣ್ಯತಿಥಿಯಿದ್ದು ಅದನ್ನು ಅವರ ಅನುಯಾಯಿಗಳು ಈ ಸಲ ಸಾಮೂಹಿಕ ರೀತಿಯಿಂದ ಆಚರಿಸಬೇಕೆಂದು ಮಾಡಿದ್ದಾರೆ. ಅವರ ಸಂಗೀತ ಪರಂಪರೆಯನ್ನು ಪ್ರಚಾರ ಮಾಡುವದು ಇದರ ಉದ್ದೇಶವಿದೆ. ಆದುದರಿಂದ ಅವರ ಶಿಷ್ಯರು ಮತ್ತು ಸಾರ್ವಜನಿಕರು ಇದರಲ್ಲಿ ಸಹಕರಿಸಬೇಕೆಂದು ಸವಾಯಿ ಗಂಧರ್ವರು ಬಿನ್ನವಿಸುತ್ತಾರೆ.

ನಿಖಿಲ ಕರ್ನಾಟಕ ಆಯುರ್ವೇದದ ೧೫ ನೇ ಸಮ್ಮೇಲನದ ಸ್ವಾಗತ ಸಮಿತಿಯು ೧೩ ನೇ ತಾರೀಕು ಸೇರಿ ಪ್ರಸಿದ್ಧ ವ್ಯಾಪಾರಸ್ಥರಾದ ಶ್ರೀ ಶಾಂತಪ್ಪಣ್ಣ ಎಳಮಲಿಯವರನ್ನು ಸ್ವಾಗತಾಧ್ಯಕ್ಷರನ್ನಾಗಿ ಆರಿಸಲಾಯಿತು. ತುಳಜಾಪುರ ಮಿಸ್ಕಿನ್ ಇವರು ಪ್ರದರ್ಶನದ ಅಧ್ಯಕ್ಷರು, ಸವದಿ ಗೋಪಾಳರಾಯರು ಕೋಶಾಧ್ಯಕ್ಷರು, ವೈದ್ಯ ಮುಳಗಿ, ದೇಸಾಯಿ, ಕಾಶೀನಾಥ ಶಾಸ್ತ್ರಿ ಗಚ್ಚಿನಮಠ ಇವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು. ಸಮ್ಮೇಲನದ ಕಾಲಕ್ಕೆ ಔಷಧ ಪ್ರದರ್ಶನ ವನಸ್ಪತಿ ಪ್ರದರ್ಶನ ಜರಗಿಸಲಾಗುವವು ವೈದ್ಯರಿಗೆ ೧೦ ರೂ. ವಿದ್ಯಾಭಿಮಾನಿಗಳಿಗೆ ೬ ರೂ. ಸ್ವಾಗತ ಸಮಿತಿಯ ವಂತಿಗೆ ಇಡಲಾಗಿದೆ.

ಹೊಳೆಆಲೂರಿನಲ್ಲಿಯ ಇಂಗ್ಲಿಶ ಶಾಲೆಗೆ ಶ್ರೀ ನಿರುಪಾಕ್ಷರಾವ ಅಳವಂಡಿಯವರು ತಮ್ಮ ಮಗಳ ಲಗ್ನದ ಕಾಲಕ್ಕೆ ೧೦೧ ರೂ. ಕಾಂಗ್ರೆಸ ಕಮಿಟಿಗೆ ೧೦೧ ರೂ. ಇಂಗ್ಲೀಶ ಶಾಲೆ ಕಾಣಿಕೆ ಕೊಟ್ಟರು. ಇಂಗ್ಲಿಶ್ ಶಾಲೆ. ಶ್ರೀ ಬಸಪ್ಪ ಜಡಮಳಿಯವರು ೧೦೦೦ ರೂ ಮತ್ತು ಕಲ್ಲಪ್ಪ ಮೊರಬದ ಇವರು ೫೦೦ ರೂಪಾಯಿ ಕೊಡಲು ವಾಗ್ದಾನವಿತ್ತಿರುವರು.

ಹುಬ್ಬಳ್ಳಿ ರೇಲ್ವೆ ಕೆಲಸಗಾರರ ಯೂನಿಯನ್ದ ವಾರ್ಷಿಕೋತ್ಸವ ಶ್ರೀ ಶಂಕರಲಿಂಗ ಇವರ ಅಧ್ಯಕ್ಷತೆಯಲ್ಲಿ ಸೇರಿ ಹೊಸ ಚುನಾವಣೆಗಳು ನಡೆದವು. ಶ್ರೀ ಶಂಭುರಾವ ಜೋಶಿಯವರು ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. ಶ್ರೀ.ನಗರ ಇವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಯುನಿಯನ್ದ ಕಾರ್ಯಕಲಾಪಗಳು ರಾಜಕೀಯಕ್ಕೆ ಅವಕಾಶ ಕೊಡಬಾರದೆಂದು ಶ್ರೀ ಶಂಕರಲಿಂಗರವರು ಕೂಲಿಕಾರರಿಗೆ ಉಪದೇಶಿಸಿದರು.

ಸರಕಾರದವರಿಂದ ನಿಯಮಿಸಲ್ಪಟ್ಟ ಪ್ರಾಂತಿಕ ಹಿಂದುಸ್ತಾನೀ ಬೋರ್ಡಿನ ಅಧಿಕಾರ ಮತ್ತು ಕಾರ್ಯ ಕ್ಷೇತ್ರಗಳ ವ್ಯಾಪಕತೆಯನ್ನು ಹೆಚ್ಚಿಸಲಾಗಿದೆ. ಸದ್ಯದ ಸದಸ್ಯರ ಸಂಖ್ಯೆಯನ್ನು ಬೆಳಸಿ ಶ್ರೀ ಶಂಕರರಾವ ದೇವ ಮತ್ತು ಕಾಕಾ ಕಾಲೇಲಕರರನ್ನು ನಿಯಮಿಸಲಾಗಿದೆ. ಆದರೆ ಕರ್ನಾಟಕಕ್ಕೆ ಮಾತ್ರ ಒಂದೇ ಸ್ಥಾನ ಕೊಡಲಾಗಿದೆ. ಇದರಿಂದ ಕರ್ನಾಟಕಕ್ಕೆ ಅನ್ಯಾಯ ಮಾಡಿದಂತಾಗಿದೆಂದು ಶ್ರೀ ಸಿದ್ಧನಾಥ ಪಂತರು ಮುಖ್ಯಮಂತ್ರಿಗಳ ಗಮನಕ್ಕೆ ತಂದಿದ್ದಾರೆ.

ವರ್ಧಾ ಹಿಂದುಸ್ಥಾನೀ ಪ್ರಚಾರ ಸಭೆಯ ಕಮಲೇಶ ಭಾರತೀಯರು ತಮ್ಮ ಕರ್ನಾಟಕ ಸಂಚಾರ ಮುಗಿಸಿ ಮುಂಬಯಿಗೆ ತೆರಳಿದರು. ಇಲ್ಲಿಯ ಜನರಿಗೆ ಹಿಂದುಸ್ಥಾನೀ ಭಾಷೆ ಅಥವಾ ಲಿಪಿ ಗೊತ್ತಿರದ್ದರಿಂದ ವಿಶೇಷ ಸವಲತ್ತು ಕೊಡಬೇಕೆಂದು ಅವರು ಅಭಿಪ್ರಾಯಪಟ್ಟರು.

ಗದಗ ಬೆಟಗೇರಿ ನಗರ ಸಭೆಯ ವಿಶೇಷ ಸಭೆ ಅಧ್ಯಕ್ಷ ಉಪಾಧ್ಯಕ್ಷರನ್ನಾರಿಸುವ ಸಲುವಾಗಿ ೭ ನೇ ತಾರೀಕು ಕೂಡುವದಿತ್ತು. ಆದರೆ ಶ್ರೀ ಚನ್ನಪ್ಪ ಹೊನಗುದ್ದಿಯವರು ೧೮-೭-೪೬ ನೇ ದಿನ ತಾವೇ ಅಧ್ಯಕ್ಷರಾಗಿ ಆರಿಸಿ ಬಂದಿರುವದಾಗಿಯೂ ಆದುದರಿಂದ ಈ ಸಭೆ ನಡೆಯಬಾರದೆಂದೂ ದಾವೆ ತಂದದ್ದರಿಂದ ಸಭೆ ನಡೆಯಲಿಲ್ಲ.

# ಕ ರ್ನಾ ಟ ಕ

### ವಿಜಾಪುರ

ಗಿರಸಾಗರ ದೇಸಗತಿಯ ನ್ಯಾಯದಲ್ಲಿ ಆಸ್ಥೆಯಿಂದ ದುಡಿದು ಆ ದೇಸಗತಿ ಖಾಲಸಾ ಆಗುವದನ್ನು ಉಳಿಸಿ ಆ ಭಾಗದಲ್ಲಿಯ ಬೀರಬಿಬ್ಬಿಯ ರೈತ ಜನರಿಗೆ ದೊಡ್ಡ ಆಧಾರರಾಗಿದ್ದ ಶ್ರೀ ರಾಮಣ್ಣ ನಾಯಿಕ ಜೋರಾಪುರ ಇವರು ೧೨ ನೇ ತಾರೀಕು ಮುಂಜಾನೆ ೧೦ ಗಂಟೆಗೆ ವೈಕುಂಠವಾಸಿಗಳಾದರು. ಇವರ ನಿಧನದಿಂದ ಆ ಭಾಗದಲ್ಲಿಯ ರೈತರಿಗೆ ಬಹಳ ಹಾನಿಯಾದಂತಾಗಿದೆ.

ಅಲಮಟ್ಟಿಯ ಶರಣ ಸಂದೇಶ ಪತ್ರಿಕೆಯ ಸಂಪಾದಕರಾದ ಶ್ರೀ ಹರ್ದೇಕರ ಮಂಜಪ್ಪನವರ ಪ್ರಕೃತಿಯ ಅಸ್ವಾಸ್ಥ್ಯದಮೂಲಕ ಒಂದು ತಿಂಗಳ ಪರ್ಯಂತ ಶರಣ ಸಂದೇಶ ಪತ್ರಿಕೆ ಹೊರಡುವದಿಲ್ಲೆಂದು ವ್ಯವಸ್ಥಾಪಕರು ತಿಳಿಸುತ್ತಾರೆ.

ಅಲಮಟ್ಟಿಯಲ್ಲಿ ಪ್ರಸಿದ್ಧ ಡಾಕ್ಟರರಾಗಿದ್ದ ಕೃಷ್ಣರಾವ ಪರ್ವತೀಕರ ಇವರು ಅಕ್ಷಯ ತಮ್ಮ ಗೃಹದಲ್ಲಿ ೮ನೇ ತಾರೀಕು ಸ್ವರ್ಗಸ್ಥರಾದರು. ಇವರು ಆಲಮಟ್ಟಿ ಸ್ಟೇಶನದಲ್ಲಿ ಕಳೆದ ೨೫ ವರ್ಷಗಳಿಂದ ಬಡಬಗ್ಗರಿಗೆ ಔಷಧೋಪಚಾರ ಮಾಡುತ್ತ ಬಂದಿದ್ದರು ಇವರು ಕಾಂಗ್ರೆಸ ಭಕ್ತರಾಗಿದ್ದರು. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

### ಬಳ್ಳಾರಿ.

ಬಳ್ಳಾರಿಯ ತರುಣ ಕವಿಗಳಲ್ಲೊಬ್ಬರಾದ ಶ್ರೀ ವಿಜಯಿಂದ್ರ ಶಾನುಭೋಗರನ್ನು ಸನ್ಮಾನಿಸುವ ಸಭೆ ೧೨ ನೇ ತಾರೀಕು ಇಟಗಿಯ ಬೋರ್ಡ ಶಾಲೆಯ ಕಟ್ಟಡದಲ್ಲಿ ಶ್ರೀ ಆಲೂರ ವೆಂಕಟರಾಯ ಅಧ್ಯಕ್ಷತೆಯಲ್ಲಿ ಜರಗಿತು. ಸಮಾರಂಭದ ಉದ್ಘಾಟನೆಯನ್ನು ಹಂಪಿ ಕ್ಷೇತ್ರದ ಶ್ರೀ ಯೋಗಿ ಅಚ್ಯುತ ಕುಮಾರರು ನೆರವೇರಿಸಿ ಕವಿಗಳನ್ನು ಆಶೀರ್ವದಿಸಿದರು.

ಆಂಧ್ರ ಇತಿಹಾಸ ಸಂಶೋಧನ ಮಂಡಲದ ಪರವಾಗಿ ಹಂಪಿಯಲ್ಲಿ ೧೩ ನೇ ತಾರೀಕು ವಿಜಯನಗರ ಸಾಮ್ರಾಜ್ಯ ದಿನ ಆಚರಿಸಲಟ್ಟಿತು. ಜಿಲ್ಲೆಯ ಬೇರೆ ಬೇರೆ ಭಾಗಗಳ ಸುಮಾರು ೧೦೦ ಕನ್ನಡ ಯುವಕರು ಅದನ್ನು ಪ್ರತಿಭಟಿಸಲು ಮಂಟಪದ ಸಮೀಪದಲ್ಲಿ ಸಮ್ಮಿಲಿತರಾಗಿದ್ದರು. ಆದರೆ ಕಲೆಕ್ಟರರಾದ ಶ್ರೀ ಅನಂತ ರಾಮನ್‌ರು ಇದು ಕೇವಲ ಸಾಂಸ್ಕೃತಿಕ ಉತ್ಸವವಾಗಿದ್ದು ರಾಜಕೀಯ ಇಲ್ಲವೆ ಭಾಷಾ ಸಂಗಾಣ ಮಹತ್ವ ಇದಕ್ಕೆ ಇಲ್ಲವೆಂದು ಹೇಳಿ ಅವರ ಸಹಕಾರ ಕೋರಿದರು. ಆನೇಗುಂದಿ ರಾಜರಾದ ಶ್ರೀ ದರಬಾರ ಕೃಷ್ಣರಾಯರು ಸ್ವಾಗತ ಭಾಷಣ ಮಾಡಿದರು. ಕಲೆಕ್ಟರರು ಉದ್ಘಾಟನ ಭಾಷಣ ಮಾಡಿದರು ವಿಲ್ಸನ್ ಕಾಲೇಜಿನ ಪ್ರೊ. ಪ್ರತಾಪಗಿರಿಯವರು ಅಧ್ಯಕ್ಷ ಭಾಷಣ ಮಾಡಿ ವಿಜಯನಗರ ಕಾಲದ ವೈಭವ ಮುಂತಾದ್ದನ್ನು ಬಣ್ಣಿಸಿ ಅದನ್ನು ಮರಳಿ ಪಡೆಯಲು ಬದ್ಧಪ್ರತಿಜ್ಞರಾಗಬೇಕೆಂದು ಕೇಳಿಕೊಂಡರು.

ಬಳ್ಳಾರಿಯಲ್ಲಿ ಮಲಬಾರಿನ 'ಕಾಳ' ಎಂಬ ಮಂತ್ರವಾದಿಯು ಶ್ರೀ ಯಾಳ್ಪಿ ವಿರೂಪಾಕ್ಷಪ್ಪನವರಿಗೆ ಮೋಸ ಮಾಡಿ ೨೦ ಸಾವಿರ ರೂಪಾಯಿ ಎತ್ತಿಕೊಂಡು ಹೋಗಿದ್ದನು. ಹಿರಿಯದು ಹೂಳಿಟ್ಟ ಹಣವನ್ನು ತೋರಿಸುವದಾಗಿ ಹೇಳಿ ಅವರ ಮನೆಯಲ್ಲಿದ್ದ ೨೦ ಸಾವಿರ ರಾಣಿ ಛಾಪಿನ ರೂಪಾಯಿಗಳನ್ನು ಎತ್ತಿಕೊಂಡು ಹೋದನು. ಪೋಲೀಸರು ಕಾಳನನ್ನು ಅವರ ಸಂಗಡಿಗನನ್ನೂ ಬಂಧಿಸಿದ್ದಾರೆ. ೧೨ ಸಾವಿರ ಹಳೆಯ ನಾಣ್ಯ ಸಹ ಸಿಕ್ಕಿವೆ.

### ಬೆಳಗಾವಿ

ಮೇ. ಜ. ಜಗನ್ನಾಥರಾವ ಭೋಸಲೆ ಇವರು ಆಜಾದ ಹಿಂದ ಸೈನಿಕರಿಗಾಗಿ ಕಾವಲುಗಾರರ ಕೆಲಸವನ್ನು ಕೊಡಿಸುವ ಏರ್ಪಾಡು ಮಾಡಿದ್ದಾರೆ ತಿಂಗಳಿಗೆ ೬೦ ರೂ. ಸಂಬಳ ಕೊಡುತ್ತಾರೆ. ಇಚ್ಛಿತ ಅರ್ಜಾದ ಹಿಂದ ಸೈನಿಕರು ಹೋಗಬಹುದು. ಆಯ. ಎನ್. ಎ. ಕಾರ್ಡು ಮತ್ತು ಡಿಸ್ಚಾರ್ಜ ಬುಕ್ಕು ತೆಗೆದುಕೊಂಡು ಹೋಗಬೇಕು ಗಾಡಿ ಖರ್ಚು ಕೊಡಲಾಗುವದು ಎಂದು ಮುಂತಾಗಿ ಶ್ರೀ ಮಂಡಗಿಯವರು ತಿಳಿಸುತ್ತಾರೆ ಮುಂಬಯಿಯಲ್ಲಿ ಆಯ. ಎನ್. ಎ. ಎನ್ಕ್ವಾಯರಿ ಮತ್ತು ರಿಲೀಫ ಕಮಿಟಿ ಟಿಳಕ ಮಂದಿರ ಕಾಂಗ್ರೆಸ ಹೌಸ ಮುಂಬಯಿ ೪ ವಿಳಾಸದಲ್ಲಿ ವಿಚಾರಿಸಬೇಕು.

ಅಕ್ಟೋಬರ ೨೧ಕ್ಕೆ ಆಜದ ಹಿಂದ ದಿನಾಚರಣೆಯನ್ನು ಮಾಡಬೇಕೆಂದು ಕೇಂದ್ರ ಸಮಿತಿಯವರು ಗೊತ್ತುಪಡಿಸಿದಂತೆ ಕರ್ನಾಟಕ ಪುರೋಗಾಮಿ ಪಕ್ಷದ ಕಾರ್ಯದರ್ಶಿಗಳು ಪ್ರಕಟನೆ ಹೊರಡಿಸಿದ್ದಾರೆ.

ಶ್ರೀ ಕ್ಷೇತ್ರ ಗುರ್ಲಹೊಸೂರಲ್ಲಿಯ ಕೈವಲ್ಯಾಶ್ರಮ ಸ್ವಾಮಿ ಮಹಾರಾಜರ ವಾರ್ಷಿಕ ಉತ್ಸವ ಪ್ರತಿ ವರ್ಷದಂತೆ ಅತಿ ವಿಜೃಂಭಣೆಯಿಂದ ಜರಗಿತು. ಶ್ರೀ ಭಾಲಚಂದ್ರಶಾಸ್ತ್ರಿ ಉಪಿನಬೆಟಗೇರಿ ಮತ್ತು ಉಳಿದ ಪಂಡಿತರ ಪ್ರವಚನಗಳು ಅನೇಕ ಜನರ ಕೀರ್ತನೆಗಳು ಜರಗಿದವು.

ಬೆಳಗಾವಿ ಜಿಲ್ಲೆಗೆ ೨೫೦೦ ಚೀಲ ಕಬ್ಬಿ ಬೀಜ ಬರತಕ್ಕದ್ದಿದೆಯೆಂದು ತಿಳಿಯುತ್ತದೆ.

ಗೋವೆಯ ಸುಪ್ರಸಿದ್ಧ ವಕೀಲರೂ ರಾಷ್ಟ್ರೀಯ ಧುರೀಣರೂ ಆದ ಶ್ರೀ ಲೋಯೋಲಾ ಇವರು ಕಳೆದ ಶುಕ್ರವಾರ ಕೋಲಂದಲ್ಲಿ ಬ್ರಿಟಿಶ್ ಹಿಂದುಸ್ಥಾನಕ್ಕೆ ಹೊರಟಾಗ ಬಂಧಿಸಲ್ಪಟ್ಟ ಸುದ್ದಿ ಬಂದಿದೆ. ಇವರು ಹಿಂದಕ್ಕೆ ಲಿಸ್ಬನ್‌ದಲ್ಲಿ ಕೂಲಿಕಾರ ಮಂತ್ರಿಗಳ ಕಾರ್ಯದರ್ಶಿಗಳಾಗಿದ್ದರು.

### ಉತ್ತರ ಕನ್ನಡ

ಕಂದಾಯ ಖಾತೆಯ ಉಪಮಂತ್ರಿಗಳಾದ ಶ್ರೀ ಕೆ. ಎಫ. ಪಾಟೀಲರು ಗಾಂಧೀಜಯಂತಿಯಲ್ಲಿ ಭಾಗ ವಹಿಸಲು ಬನವಾಸಿಗೆ ಹೋಗಿದ್ದರು. ಅಲ್ಲಿ ಮಧುಕೇಶ್ವರ ದೇವಸ್ಥಾನದಲ್ಲಿ ಸೇರಿದ ಸಭೆಯಲ್ಲಿ ಅವರನ್ನು ವಿವಿಧ ಸಂಘ ಸಂಸ್ಥೆಗಳವರು ಹಾರ ತುರಾಯಿಗಳಿಂದ ಸನ್ಮಾನಿಸಿದರು. ಕೆ. ಎಫ್. ಪಾಟೀಲರು ಮಂತ್ರಿ ಮಂಡಳದ ಕಾರ್ಯಧ್ಯೇಯ ಮುಂತಾದ್ದನ್ನು ವಿವರಿಸಿದರು

ಶ್ರೀ ಕೆ. ಎಫ್. ಪಾಟೀಲರು ಬನವಾಸಿಗೆ ಹೋದಾಗ ವರದಾ ನದಿಗೆ ಪೂಲು ಕಟ್ಟುವ ಅವಶ್ಯಕತೆಯನ್ನು ಪುರ ಪ್ರಮುಖರು ಒತ್ತಿ ಹೇಳಿದರು. ಈ ಬಗ್ಗೆ ಸರಕಾರದವರು ಲಕ್ಷ ಪೂರೈಸುವರೆಂದು ಅವರು ತಿಳಿಸಿದರು.

ಶ್ರೀ ರಾಮರಾವ ಎಲ್. ಕೊಡಿಯಾಳ ಇವರು ಕುಮಟೆಯಲ್ಲಿ ೧೩-೧೦-೪೬ ನೆಯ ದಿನ ಹೃದ್ರೋಗದಿಂದ ಸ್ವರ್ಗಸ್ಥರಾದರು. ಮರಣ ಕಾಲದಲ್ಲಿ ಅವರ ವಯಸ್ಸು ೭೫. ವರುಷ ೧೯೨೮ ರ ವರೆಗೆ ಇವರು ವಿಜಾಪುರ ಜಿಲ್ಲಾ ಜಡ್ಜ ಕೋರ್ಟಿನ ಶಿರಸ್ತೇದಾರರಾಗಿ ಕೆಲಸ ಮಾಡಿ ಪೆನಶನ್ ಪಡೆದ ಬಳಿಕ ಕಾನಸಗಲ್ಲ ಮತ್ತು ಸವಣೂರುಗಳಲ್ಲಿ ಸುಮಾರು ೧೫ ವರುಷಗಳ ವರೆಗೆ ವಕೀಲಿ ನಡೆಸಿದರು. ಅನಂತರ ದೇಹಾಲಸ್ಯದ ಮೂಲಕ ಕುಮಟೆಯಲ್ಲಿ ತಮ್ಮ ಮಗನ ಹತ್ತರ ಇರುತ್ತಿದ್ದರು. ಅಕ್ಷಯ ನಿಧನ ಹೊಂದಿದರು. ಇವರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ.

ಸಾಂಗಲಿ ಸಂಸ್ಥಾನ ಶಾಸನ ಸಭೆಯ ಪ್ರಜಾ ಪರಿಷತ್ ಪಕ್ಷದ ಹಾಗು ಪಾರ್ಲಮೆಂಟರಿ ಬೋರ್ಡಿನ ಸಭೆ ಸೇರಿ ಲೋಕಮಂತ್ರಿಗಳಾದ ಶ್ರೀ ಬಿ. ಎಸ್. ಕೋರೆಯವರು ಪ್ರಥಮ ಸಚಿವರಾಗಿ ಆರಿಸಲ್ಪಟ್ಟರು. ಉಳಿದ ಮಂತ್ರಿಗಳನ್ನು ಆರಿಸಿಕೊಳ್ಳುವ ಅಧಿಕಾರ ಅವರಿಗೆ ಕೊಡಲಾಯಿತು.

### ಕನ್ನಡ ಸಂಸ್ಥಾನ

ಹೊಳೆನರಸೀಪುರದಲ್ಲಿ ಕಳೆದ ಗುರುವಾರ ದಿವಸ ಗೊಲ್ಲರ ಎರಡು ಬಣಗಳಲ್ಲಿ ಬೆಳ್ಳಿ ನಾಣ್ಯದಾಸೆ ಸಂಬಂಧದಲ್ಲಿ ಹೊಡೆದಾಟವಾಗಿ ಇಬ್ಬರು ಹುಡುಗರು ಹಾಗು ಒಬ್ಬ ಹುಡಿಗೆ ಒಳಗೊಂಡು ೮ ಜನರು ಸತ್ತಿದ್ದು ಜಿಲ್ಲಾ ಪೋಲೀಸ ಸುಪರಿಂಟೆಂಡೆಂಟರು ಕೂಡಲೆ ಹೋಗಿ ೧೧ಜನರನ್ನು ಬಂಧಿಸಿದರು. ಕಂಟಿಗಳಲ್ಲಿ ಮೂರು ಹೆಣಗಳು ಸಿಕ್ಕಿರುವವು. ೬ ಜನ ಪಲಾಯನ ಹೇಳಿದ್ದು ಅವರ ಶೋಧ ನಡೆದಿದೆ.

ನಿಜಾಮ ಸಂಸ್ಥಾನದಲ್ಲಿ ಈ ವರ್ಷ ೪೫ ಲಕ್ಷ ಟನ್ ಧಾನ್ಯ ವಸೂಲ ಮಾಡಿ ೧ ಲಕ್ಷ ಟನ್ ಕಾದಿಡಲಾಗುವದು. ಉಳಿದದ್ದನ್ನು ಅಂತರಿಕ ಬಳಿಕೆ ಮತ್ತು ನಿರ್ಯಾತಕ್ಕಾಗಿ ಬಳಸಲಾಗುವದು. ೧೨ ಔಂಸಿನ ಸದ್ಯದ ಸೀದಾ ಇನ್ನು ಕೆಲ ದಿನ ಸಾಗಿಸಲಾಗುವದು. ಬಡವರಿಗೆ ಕಡಮೆ ಬೆಲೆಯಲ್ಲಿ ಧಾನ್ಯ ಪೂರೈಸಲು ಸರಕಾರ ೧ ಕೋಟಿ ರೂಪಾಯಿ ಮಂಜೂರ ಮಾಡಿರುವದು ಬೇಳೆ ಎಣ್ಣೆ ಕಾಳು ಹಿಂಡಿ ಇವುಗಳ ಮೇಲೆ ನಿಯಂತ್ರಣ ಹಾಕುವ ವಿಚಾರವೂ ಇದೆ.

ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು ಮತ್ತು ವಿ. ಶಿವಮೂರ್ತಿಶಾಸ್ತ್ರಿಗಳು ೪-೧೦-೪೬ ನೇ ದಿನ ಹೈದ್ರಾಬಾದ ಸಂಸ್ಥಾನದ ಮುಖ್ಯಮಂತ್ರಿಗಳಾದ ಸರ್ ಮಿರ್ಜಾ‌ರವರಿಗೆ ಭೆಟ್ಟಿಯಾಗಿ ಹೈದರಾಬಾದ ಕರ್ನಾಟಕದ ಸಮಸ್ಯೆಗಳ ವಿಷಯವಾಗಿ ಮಾತನಾಡಿದರು. ಮಂತ್ರಿಗಳು ಇವರಿಬ್ಬರೊಡನೆ ಕನ್ನಡದಲ್ಲಿಯೆ ಮಾತಾಡಿ ಸಂತೋಷ ಪ್ರದರ್ಶಿಸಿದರು.

ಲಂಕಾದಹನ ನಾಟಕದಲ್ಲಿ ಮಾರುತಿಯ ಪಾತ್ರವಹಿಸಿ ಕಲಿಯುಗದ ಮಾರುತಿಯೆಂದು ಖ್ಯಾತಿಹೊಂದಿದ್ದ ಶ್ರೀ ಬಿ. ನಂಜುಂಡಯ್ಯ ಇವರು ಹೊಟ್ಟೆನೋವಿನಿಂದ ೭ನೇ ತಾರೀಕು ಹರಿಹರದಲ್ಲಿ ಕೈಲಾಸವಾಸಿಗಳಾದರು. ಇವರು ತಮ್ಮ ವೆಚ್ಚದಿಂದಲೆ ಆಂಜನೆಯ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಿದ್ದರು. ಇವರ ನಿಧನದಿಂದ ಕರ್ನಾಟಕದ ಪ್ರಮುಖ ನಟನೊಬ್ಬ ಇಲ್ಲದಂತಾಯಿತು. ಪರಮಾತ್ಮನು ಮೃತರ ಆತ್ಮಕ್ಕೆ ಶಾಂತಿಯನ್ನೀಯಲಿ.

ಆಳಂದದಲ್ಲಿ ಸಪ್ಟಂಬರ ೨೩ಕ್ಕೆ ಸಂಭವಿಸಿದ ಜಾತೀಯ ಗಲಭೆಯಲ್ಲಿ ಸುಮಾರು ೨೫ ಅಂಗಡಿಗಳನ್ನೂ ವ್ಯಾಯಾಮ ಶಾಲೆ ಹಾಗು ವಾಚನಾಲಯಗಳನ್ನೂ ಲೂಟಿ ಮಾಡಿರುವದಲ್ಲದೆ ೨-೩ ದೇವಾಲಯಗಳು ವಿಗ್ರಹಗಳು ನಾಶವಾಗಿವೆ. ೮—೧೦ ಜನರಿಗೆ ತೀವ್ರ ಗಾಯಗಳಾಗಿವೆ. ೫೦—೬೦ ಜನರಿಗೆ ಕಿರಕಳ ಗಾಯಗಳಾಗಿವೆ. ಕಮಲಾಪುರದಲ್ಲಿ ಗಲಭೆ ಮೂಲಕ ಬಂಧಿಸಿದ ೨೫ ಜನರಲ್ಲಿ ೧೨ ಜನರನ್ನು ಜಾಮೀನ ಮೇಲೆ ಬಿಡಲಾಗಿದೆ. ಆಳಂದದಲ್ಲಿ ಸಂಭವಿಸಿದ ಗಲಭೆ ಸುದ್ದಿಯನ್ನು ದಿವಾಣ ಸರ್ ಮಿರ್ಜಾಸಾಹೇಬರಿಗೆ ಮತ್ತು ಸಂಸ್ಥಾನ ಕಾಂಗ್ರೆಸ್ಸಿಗೆ ತಿಳಿಸಿರುವರೆಂದು ತಿಳಿಯುತ್ತದೆ.

ನಾನಾ ಕಾರಣಗಳಿಂದ ಮತಾಂತರ ಹೊಂದುತಿರುವ ನಿರ್ಗತಿಕ ಮತ್ತು ಆಶ್ರಯವಿಹೀನರಾದ ಹಿಂದೂ ಸ್ತ್ರೀಯರ ಮತ್ತು ಅನಾಥ ಬಾಲಕರ ಸಲುವಾಗಿ ಶಿವಮೊಗ್ಗೆಯಲ್ಲಿ ರಕ್ಷಣಾಲಯವೊಂದು ಪ್ರಾರಂಭವಾಗಿದ್ದು ಈ ಬಗ್ಗೆ ಸಮಸ್ತ ಹಿಂದೂ ಧರ್ಮಾಭಿಮಾನಿಗಳು ಒಂದು ಹಿಡಿ ಅಕ್ಕಿ ಮತ್ತು ಒಂದಾಣೆಯಂತೆ ಸಹಾಯ ನೀಡಿ ನಿರ್ಗತಕರನ್ನುಳಿಸಬೇಕೆಂದು ಮೈಸೂರ ಸಂಸ್ಥಾನ ಹಿಂದೂ ಮಹಾಸಭೆಯವರು ಬಿನ್ನವಿಸುತ್ತಾರೆ.

ದಾವಣಗೇರಿಯ ಶ್ರೀ ವಿರಕ್ತಮಠದಲ್ಲಿ ೬ನೇ ತಾರೀಕು ಸಭೆ ಸೇರಿ ಲೀಡರ್ ಮುತ್ತಿಗೆ ಕವಿತೆಯನ್ನು ಬರೆದ ಶ್ರೀ ಕೋ. ಚನ್ನಬಸಪ್ಪ ಬಳ್ಳಾರಿ ಇವರಿಗೆ ವೀರಶೈವ ಸೇವಾ ಮಂಡಲಿಯವರು ಏರ್ಪಡಿಸಿದ ಕವಿತಾ ಸ್ಪರ್ಧೆಯ ೨ ನೇ ಬಹುಮಾನ ಕೊಡಲಾಯಿತು. ವೆ. ಮೂ. ಸಂಗಪ್ಪಶಾಸ್ತ್ರಿಗಳು ಬಹುಮಾನ ವಿನಿಯೋಗ ಮಾಡಿದರು. ಕಾಯಕ ಗೀತೆ ಎಂಬ ಕವಿತೆ ಬರೆದದ್ದಕ್ಕೆ ಶ್ರೀ ಗಂಗಪ್ಪಾ ವಾಲಿಯವರಿಗೆ ೧೨೦ ರೂ. ಬಹುಮಾನ ದೊರೆಯಿತು. ಮಂಗಳಾರತಿಯಾದ ನಂತರ ಸಭಾಕಾರ್ಯ ಕೊನೆಗಂಡಿತು.

## ಭಟಕಳ ನೌಕಾಂಗಣದ ಯೋಜನೆ

### ಸಂಪೂರ್ಣ ರಚಿಸಲು ಭಟ್ಟರ ಪ್ರಯತ್ನ

ಬ್ರಿಟಿಶ ನೌಕಾ ತಜ್ಞರ ಸಹಾಯದಿಂದ ಭಟಕಳ ಬಂದರದ ಯೋಜನೆಯನ್ನು ಸಂಪೂರ್ಣವಾಗಿ ಸಿದ್ಧಪಡಿಸಿಕೊಳ್ಳಲು ಹೋದ ಶ್ರೀ. ಎ. ಎಂ. ಭಟ್ಟರು ಬ್ರಿಟನದಲ್ಲಿ ಈ ಬಗ್ಗೆ ತಾವಿದುವರೆಗೆ ಮಾಡಿದ ಕಾರ್ಯವನ್ನು ನಿರೂಪಿಸಿ ಈ ಕೆಳಗಿನಂತೆ ಒಂದು ಪತ್ರ ಬರೆದಿದ್ದಾರೆ.

"ಭಟಕಳ ನೌಕಾಂಗಣದ ಯೋಜನೆಯನ್ನು ಸಿದ್ಧಪಡಿಸಲು ನಾನು ಇಲ್ಲಿಯ ಪ್ರಸಿದ್ಧ ಇಂಜನಿಯರಿಂಗ ಕಂಪನಿಗಳಾದ ಮೆಸರ್ಸ ಸರ್ ಬ್ರೂಸ್‌ವ್ಹಾಯಿಟ, ವೂಲ್ಫಬ್ಯಾರಿ ಅ್ಯಂಡ ಪಾರ್ಟನರ್ಸ ಇವರನ್ನು ಭೆಟ್ಟಿಯಾದೆ. ಭಟಕಳದಲ್ಲಿ ನೌಕಾಂಗಣ ಕಟ್ಟುವದಕ್ಕಾಗಿ ನಾನು ಆರಿಸುವ ಸ್ಥಾನವನ್ನು ಈ ಕಂಪನಿಯವರು ಬ್ರಿಟಿಶ ನೌಕಾಪಡೆಯ ಸಲಹೆಯಂತೆ ಒಪ್ಪಿರುವದಲ್ಲದೆ ನನ್ನ ನಕ್ಷೆಗಳನ್ನೂ ಫೋಟೋಗಳನ್ನೂ ಒಪ್ಪಿದ್ದಾರೆ. ನೌಕಾಂಗಣ ಕಟ್ಟುವದಕ್ಕಾಗಿ ಪಶ್ಚಿಮ ಭಾರತದಲ್ಲಿ ಇದರಂಥ ಸ್ಥಳವು ಬೇರೊಂದಿಲ್ಲವೆಂದು ಅವರ ಅಭಿಪ್ರಾಯವಾಗಿದೆ. ಅಲ್ಲದೆ ನೌಕಾಂಗಣದ ನಕ್ಷೆಯನ್ನು ತೆಗೆಯುವದಕ್ಕಾಗಿ ಅವರು ನನ್ನ ಯೋಜನೆಗಳನ್ನು ಸ್ವೀಕರಿಸಿದ್ದಾರೆ.

"ಈ ಕಂಪನಿಗಳು ಮುಂಬಯಿ ಪೋರ್ಟ ಟ್ರಸ್ಟ, ಭಾರತ ರೇಲ್ವೆಗಳು ಮುಂತಾದ ಅನೇಕ ಸಂಸ್ಥೆಗಳಿಗೆ ಸಲಹೆಗಾರರಾಗಿದ್ದಾರೆ. ಬ್ರಿಟನದಲ್ಲಿ "ಮಲ್ಬರಿ" ಎಂಬ ತಾತ್ಪೂರ್ತಿಕವಾದ ಪ್ರಥಮ ಶ್ರೇಣಿಯ ಬಂದರವನ್ನು ಕಟ್ಟಿದ ಮೇಧಾವಿಗಳಾಗಿದ್ದಾರೆ. ಸರ್ ಬ್ರೂಸ್ ವ್ಹಾಯಿಟರು ನಂತರ ಈ ಮಲ್ಬರಿ ಬಂದರವನ್ನು ಫ್ರಾನ್ಸಕ್ಕೆ ಸಾಗಿಸಿ ಮಿತ್ರ ಸೈನಿಕರಿಗೆ ಅಲ್ಲಿ ಇಳಿಯಲು ಅನುಕೂಲತೆ ಒದಗಿಸಿ ಮಿತ್ರರಿಗೆ ವಿಜಯವನ್ನು ಇವರು ದೊರಕಿಸಿಕೊಟ್ಟರು.

ವಿಶಾಖಪಟ್ಟಣದ ನೌಕಾಂಗಣದ ಮ್ಯಾನೆಜರರಾಗಿದ್ದ ಮಿ. ಜಾರ್ಜ ಕ್ರೈಕ ಶಾಂಕು ಭಟಕಳ ನೌಕಾಂಗಣದ ಯೋಜನೆಯಲ್ಲಿ ಐದು ವರ್ಷಗಳ ವರೆಗೆ ಮ್ಯಾನೇಜರರಾಗಿ ದುಡಿಯಲು ಒಪ್ಪಿಕೊಂಡಿದ್ದಾರೆ. ಇನ್ನೊಬ್ಬ ನುರಿತ ಯಂತ್ರಜ್ಞನನ್ನೂ ದೊರಕಿಸಿರುವೆ.

"ನಾನು ಗ್ಲಾಸಗೋ ನೌಕಾಂಗಣವನ್ನು ನೋಡಲು ಹೋದಾಗ ಅಲ್ಲಿಯ ಅಧಿಕಾರಿಗಳು ನನ್ನನ್ನು ಉತ್ಸಾಹದಿಂದ ಕರೆದೊಯ್ದು ಅಲ್ಲಿಯ ಎಲ್ಲ ಕೆಲಸವನ್ನು ತೋರಿಸಿದರು. ರಾಯಲ ಟೆಕ್ನಿಕಲ ಕಾಲೇಜ, ಗ್ಲಾಸಗೋ ವಿಶ್ವವಿದ್ಯಾಲಯ ನೌಕಾ ಶಿಕ್ಷಣದ ಕ್ರಮವನ್ನು ಪರಿಶೀಲಿಸಿದ್ದೇನೆ. ನ್ಯೂಕಾಸಲದಲ್ಲಿಯ ಕಿಂಗ್ಸ ಕಾಲೇಜಕ್ಕೂ ಭೆಟ್ಟಿಕೊಟ್ಟಿದ್ದೇನೆ.

"ಭಟಕಳ ನೌಕಾಂಗಣದ ಯೋಜನೆಯನ್ನು ಸಂಪೂರ್ಣವಾಗಿ ಸಿದ್ಧಪಡಿಸಿಕೊಂಡು ಈ ತಿಂಗಳ ಕೊನೆಗೆ ನಾನು ಭಾರತಕ್ಕೆ ಬರುವೆನು. ಭಾರತ ಸರಕಾರದ ಮನ್ನಣೆ ಪಡೆಯುವದಕ್ಕಾಗಿ ನಾನು ನನ್ನ ಯೋಜನೆಯನ್ನು ಒಪ್ಪಿಸುವೆನು.

## ಕರ್ನಾಟಕ ಸಂಘ ಬಡೋದೆ

ಬಡೋದೆ ಕರ್ನಾಟಕ ಸಂಘದವರು ವಿಜಯದಶಮಿ ಸಮಾರಂಭವನ್ನು ಮೇಜರ ಜನರಲ್ ಸಡೇಕರ ಪವಾರ ಇವರ ನೇತೃತ್ವದಲ್ಲಿ ಸಭೆ ಸೇರಿ ಕೆಲ ನಿರ್ಣಯ ಮಾಡಲಾಯಿತು. ಮುಂಬಯಿ ಮದ್ರಾಸ ಆಕಾಶವಾಣಿಗಳಲ್ಲಿ ಬೇರೆ ಭಾಗಗಳಿಗೆ ಇದ್ದಷ್ಟು ಸೌಕರ್ಯಗಳು ಕನ್ನಡ ಭಾಷೆಗೂ ಇರಬೇಕೆಂದು ಕೇಳಿಕೊಳ್ಳಲಾಯಿತು.

ಮೇಣೇಧಾಳದಲ್ಲಿ ಕಳೆದ ವರ್ಷ ತರುಣರಿಂದ ಸ್ಥಾಪಿತವಾದ ಶ್ರೀ ಶ್ಯಾಮಸುಂದರ ವಾಚನಾಲಯದವರು ಶ್ರೀ ಮುಗಳಿ ಶ್ರೀನಿವಾಸರಾಯರ ನೇತೃತ್ವದಲ್ಲಿ ವಿಜೃಂಭಣೆಯಿಂದ ನಾಡಹಬ್ಬವನ್ನು ಜರಗಿಸಿದರು. ಬೇರೆ ಬೇರೆ ಮಹನೀಯರು ಬೇರೆ ಬೇರೆ ವಿಷಯಗಳಲ್ಲಿ ಮಾತಾಡಿದರು. ಪಾರಿತೋಷಕಗಳೂ ಹಂಚಲ್ಪಟ್ಟವು.

# ಹಿಂದುಸ್ತಾನ

## ಮುಂಬಯಿ

ಹತ್ತು ದಿನಗಳ ಶಾಂತತೆಯ ನಂತರ ಅಹಮದಾಬಾದದ ಉಪನಗರ ಗೊಮಟಿಪುರದಲ್ಲಿ ಗಲಭೆ ಸಂಭವಿಸಿ ಒಬ್ಬನಿಗೆ ಗಾಯವಾಗಿರುವದು. ಪೋಲೀಸರು ಹೋಗಿ ಗೋಳೀಬಾರು ಮಾಡಿದರು. ಗೋಳೀಬಾರಿನಲ್ಲಿ ಯಾರಿಗೂ ಗಾಯವಾಗಿಲ್ಲ. ಸಾಯಂಕಾಲ ಪೋಲೀಸರ ವಾಹನಕ್ಕೆ ಜನರು ಬೆಂಕಿ ಹಚ್ಚಿದ್ದರಿಂದ ಮತ್ತೆ ಗೋಳೀಬಾರ ಆಯಿತು. ಅದರಲ್ಲಿ ಯಾರಿಗೂ ಗಾಯವಾಗಿಲ್ಲ.

ಮುಂಬಯಿಯಲ್ಲಿ ೧೪ ನೇ ತಾರೀಕು ಸಾಯಂಕಾಲ ಮತ್ತೆ ಎರಡು ಇರಿತ ಹಾಗು ಪಾಯಧೋಣಿ ಭಾಗದಲ್ಲಿ ಆರು ವಖಾರಗಳಿಗೆ ಬೆಂಕಿ ಈ ದುರ್ಘಟನೆಗಳು ನಡೆದವು. ವಖಾರಗಳಲ್ಲಿ ಬಟಾಟೆ ಹಾಗು ಬೇರೆ ಕೆಲವು ಸರಕುಗಳು ಇದ್ದವು. ಹಾನಿಯೆಷ್ಟಾಗಿದೆಂಬುದು ಗೊತ್ತಾಗಿಲ್ಲ.

ಗ್ವಾಲೇರ ಸಂಸ್ಥಾನದ ಪರರಾಷ್ಟ್ರ ಖಾತೆಯ ಮಂತ್ರಿಗಳಾಗಿದ್ದ ಸರ್ ಮನುಭಾಯಿ ಮೆಹತಾ ಇವರು ೧೪ ನೇ ತಾರೀಕು ಮುಂಜಾನೆ ಮುಂಬಯಿಯಲ್ಲಿ ನಿಧನಹೊಂದಿದರು. ಇವರು ಹಿಂದೆ ಬಡೋದೆ ಹಾಗು ಬಿಕಾನೇರ ಸಂಸ್ಥಾನಗಳ ದಿವಾಣರಾಗಿದ್ದರು.

ಮುಂಬಯಿ ಸರಕಾರದವರು ಒಕ್ಕಲತನ ಖಾತೆ ಮೊದಲಾದವುಗಳಿಂದ ಈ ವರೆಗಾದ ಭೂ ಸುಧಾರಣೆಯನ್ನು ಪರಿಶೀಲಿಸಿ ಅದರ ಪುನರ್ಘಟನೆ ಸಂಬಂಧದಲ್ಲಿ ವರದಿ ಮಾಡಲು ದಕ್ಷಿಣ ಭಾಗದ ಕಮೀಶನರರಾದ ಶ್ರೀ ಭಿಡೆಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿದ್ದಾರೆ.

ಪ್ರಾಂತದಲ್ಲಿಯ ವಿದ್ಯಾಸಂಸ್ಥೆಗಳಲ್ಲ ಹೆಚ್ಚೆಚ್ಚು ಶಿಕ್ಷಣ ಸೌಕರ್ಯಗಳನ್ನೊದಗಿಸಲು ಪ್ರಯತ್ನಿಸಲಿ ಎಂದು ಮುಂಬೈ ಮುಖ್ಯಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ನವೀನವಾದ ಸಾಯನ್ಸ ಕಾಲೇಜಿನ ಅಡಿಗಲ್ಲನ್ನಿಡುತ್ತ ಹೇಳಿದರು. ಈ ಕಾಲೇಜಿನ ಕಟ್ಟಡ ಮತ್ತು ಸಲಕರಣೆಗಳಾಗಿ ಈ ವರೆಗೆ ೨ ಲಕ್ಷ ರೂಪಾಯಿಗಳು ವೆಚ್ಚವಾಗಿವೆ.

ಮುಂಬಯಿ ಶಾಸನ ಸಭೆಯ ಸದಸ್ಯರಾದ ಶ್ರೀ ರಾ. ಶ್ರೀ. ಹುಕ್ಕೇರಿಕರರು ಮುಂಬಯಿ ಮಂತ್ರಿಗಳಾದ ಶ್ರೀ ಬಿ. ಜಿ. ಖೇರ, ಎಂ. ಪಿ. ಪಾಟೀಲ, ವರ್ತಕ ಮತ್ತು ಸದಸ್ಯರಾದ ಡಾ. ಲಾಗು, ಶಾಸ್ತ್ರಿ ಆರ್. ಎ. ಕುಲಕರ್ಣಿ ಮೊದಲಾದವರಿಗೆ ಪುಣೆಯಲ್ಲಿ ಶ್ರೀ ಗುರುಸ್ವಾಮಿಯವರ ಕಟ್ಟಡದಲ್ಲಿ ಸಂತೋಷಕೂಟವನ್ನು ಕೊಟ್ಟರು. ಭೋಜನದ ನಂತರ ಪ್ರಭಾತ್ ಫಿಲ್ಮ ಕಂಪನಿಯ ಸಹಾಯಕ ಸಂಗೀತ ಡಾಯರೆಕ್ಟರ ವೇಣು ವಿಶಾರದ ಶ್ರೀ ಪ್ರಲ್ಹಾದರಾವ ಹೊಂಬಳ ಇವರ ಸುಶ್ರಾವ್ಯ ವೇಣುವಾದನವಾಯಿತು. ಶ್ರೀ ಖೇರರು ಅದನ್ನು ಬಹಳವಾಗಿ ಮೆಚ್ಚಿದರು.

ಮುಂಬಯಿ ಪ್ರಾಂತದ ಲಂಚ ನಿರೋಧಕ ಶಾಖೆಯವರು ಕಳೆದ ಜೂನ ತಿಂಗಳಿಂದ ಈ ವರೆಗೆ ೭೫ ಲಂಚದ ಆರೋಪದ ಗುನ್ಹೆಗಳನ್ನು ತಪಾಸ ಮಾಡಿದ್ದಾರೆ. ಇವುಗಳಲ್ಲಿ ೪೨ ಮಹಾರಾಷ್ಟ್ರ, ೨೯ ಕರ್ನಾಟಕ ಮತ್ತು ೪ ಗುಜರಾಥದ ಅಪರಾಧಗಳಿವೆ. ಈ ಅಪರಾಧಿಗಳಲ್ಲಿ ಧಾರವಾಡ ಜಿಲ್ಹೆಯ ಮಾಮಲೇದಾರರೊಬ್ಬರು, ಬೆಳಗಾವಿಯ ಇಬ್ಬರು ಸಬ್ ಇನಸ್ಪೆಕ್ಟರರು ಇರುವರು. ಜನತೆಯಿಂದ ಇನ್ನೂ ಸಾಕಷ್ಟು ಸಹಾಯ ಅಧಿಕಾರಿಗಳಿಗೆ ಸಿಕ್ಕುವದಿಲ್ಲೆಂದು ಈ ಖಾತೆಯ ಉಚ್ಚಾಧಿಕಾರಿಗಳೊಬ್ಬರ ಅಭಿಪ್ರಾಯವಿದೆಂದು ಮುಂತಾಗಿ ಪ್ರಕಟಿಸಲಾಗಿದೆ.

ನ್ಯಾಯಮೂರ್ತಿ ರಾನಡೆ ಮತ್ತು ಗೋಖಲೆಯವರಿಂದ ಸ್ಥಾಪಿತವಾಗಿರುವ ಪುಣೆಯ ಡೆಕ್ಕನ ಸಭೆಯ ಹೀರಕ ಮಹೋತ್ಸವ ಬರುವ ಜನವರಿಯಲ್ಲಿ ವಿಜೃಂಭಣೆಯಿಂದ ಜರುಗಿಸಲಿರುವರು.

## ಹೊಸದಿಲ್ಲಿ

ಕಾಂಗ್ರೆಸ ಕಾರ್ಯಕಾರೀ ಸಮಿತಿಯ ಸಭೆ ದಿಲ್ಲಿಯಲ್ಲಿ ಅಕ್ಟೋಬರ ೨೪ ಕ್ಕೆ ಭಂಗಿ ವಸತಿಯಲ್ಲಿ ಸೇರುವದು. ಪೂರ್ವ ಬಂಗಾಲದಲ್ಲಿಯ ಪರಿಸ್ಥಿತಿ ಮತ್ತು ನಡುಗಾಲ ಸರಕಾರದ ಪುನರ್ಘಟನೆ ಮೊದಲಾದ ವಿಷಯಗಳನ್ನು ವಿಚಾರಿಸಲಾಗುವದು. ಕಳೆದ ಸಲದ ಆಮಂತ್ರಿತರನ್ನು ಮತ್ತೆ ಆಮಂತ್ರಿಸಲಾಗುವದು.

ದಿಸೆಂಬರದಲ್ಲಿ ಭಾರತದಲ್ಲಿ ಸೇರಲಿರುವ ಘಟನಾ ಸಮಿತಿಯ ಅಧಿವೇಶನದ ಕಾಲಕ್ಕೆ ಹಾಜರಿರಲು ಶ್ರೀ ಜೆ ಜೆ ಸಿಂಗರು ನ್ಯೂಯಾರ್ಕನಿಂದ ದಿಲ್ಲಿಗೆ ಬರಲಿರುವರು.

ಹಿಂದುಸ್ತಾನದಲ್ಲಿ ಮತ್ತೆ ನಾಲ್ಕು ರಾಷ್ಟ್ರೀಯ ಪ್ರಯೋಗ ಶಾಲೆಗಳನ್ನು ೩೩೨ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ಪ್ರಾರಂಭಿಸಬೇಕೆಂದು ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನ ಮಂಡಳ ನಿರ್ಧರಿಸಿದೆ. ಧನಬಾಡ, ಜಮಶೇದಪುರ, ದಿಲ್ಲಿ ಮತ್ತು ಪುಣೆಗಳಲ್ಲಿ ಈ ಶಾಲೆಗಳು ಸ್ಥಾಪಿತವಾಗುವವು.

ನಡುಗಾಲ ಸರಕಾರದ ಆಶ್ರಯದಲ್ಲಿ ಎಲ್ಲ ಪ್ರಾಂತಗಳ ಮುಖ್ಯ ಮಂತ್ರಿಗಳ ಸಭೆ ದಿಲ್ಲಿಯಲ್ಲಿ ಅಕ್ಟೋಬರ ೨೧ ಕ್ಕೆ ಸೇರುವದು. ಪ್ರಾಂತಿಕ ಆಡಳಿತದ ಮಹತ್ವದ ವಿಷಯಗಳನ್ನು ಈ ಸಭೆಯಲ್ಲಿ ಚರ್ಚಿಸಲಾಗುವದೆಂದು ತಿಳಿಯುತ್ತದೆ.

ಪಂಡಿತ ಜವಾಹರಲಾಲ ನೆಹರುರವರು ೧೬ ನೇ ತಾರೀಕು ಮುಂಜಾನೆ ವಿಮಾನ ಮಾರ್ಗವಾಗಿ ದಿಲ್ಲಿಯಿಂದ ಪೇಶಾವರಕ್ಕೆ ಹೋದರು. ಅಲ್ಲಿಂದ ಅವರು ಸರಹದ್ದ ಪ್ರಾಂತದ ಗುಡ್ಡಗಾಡು ಪ್ರದೇಶದಲ್ಲಿ ಸಂಚಾರ ಕೈಕೊಳ್ಳುವರು. ಪಂಡಿತ ನೆಹರುರವರೊಡನೆ ಪರರಾಷ್ಟ್ರ ಖಾತೆಯ ಸಹಕಾರ್ಯದರ್ಶಿಗಳು ಮತ್ತು ಹಲವು ಪತ್ರಿಕಾ ಪ್ರತಿನಿಧಿಗಳು ಹೋಗಿರುವರು.

## ಮದ್ರಾಸ

ಫ್ರೆಂಚ ಹಿಂದುಸ್ತಾನ ರಾಷ್ಟ್ರೀಯ ಸಭೆಯ ಕಾರ್ಯಕಾರೀ ಸಮಿತಿಯು ಅರ್ ಪುರುಷೋತ್ತಮನ್‌ರ ಅಧ್ಯಕ್ಷತೆಯಲ್ಲಿ ಪಾಂಡಿಚೇರಿಯಲ್ಲಿ ೧೪ ನೇ ತಾರೀಕಿಗೆ ಕೂಡಿ ಪರಕೀಯರ ಭಾಷಣಗಳಿಗೆ ಸರಕಾರ ಪ್ರತಿಬಂಧ ಹಾಕಿದ್ದನ್ನು ನಿಷೇಧಿಸಿದ್ದಲ್ಲದೆ ಫ್ರೆಂಚ ಹಿಂದೀ ಜನರು ಬೃಹತ್ ಹಿಂದುಸ್ತಾನದ ಜನತೆಯ ಅಂಗವೇ ಆಗಿರುವದರಿಂದ ಹಿಂದೀ ಧುರೀಣರನ್ನು ಪರಕೀಯರೆಂದು ಫ್ರೆಂಚ ಹಿಂದೀಯರು ಗಣಿಸುವದಿಲ್ಲೆಂದು ಜಾಹೀರ ಮಾಡಿದರು.

ದಕ್ಷಿಣ ಹಿಂದುಸ್ತಾನದಲ್ಲಿ ವಿಖ್ಯಾತವಾದ ತಿರುಚೆಂದೂರದ ಶ್ರೀ ಸುಬ್ರಹ್ಮಣ್ಯಸ್ವಾಮಿ ಗುಡಿಯನ್ನು ಹರಿಜನರಿಗಾಗಿ ತೆರೆಯಲಾಗಿದೆ.

ಸೇಲಂದಲ್ಲಿ ೯ ನೇ ತಾರೀಕಿನ ಗಲಭೆ ಹಾಗು ಗೋಳೀಬಾರಿನ ಪರಿಣಾಮವಾಗಿ ೧೨ ನೇ ತಾರೀಕಿನಿಂದ ಮತ್ತೆ ಗಲಭೆಗಳು ಸಂಭವಿಸಿವೆ. ಅಧಿಕಾರಿಗಳು ೧೪೪ ಕಲಮು ಜಾರಿ ಮಾಡಿದ್ದಾರೆ. ಗಲಭೆ ಸಂಬಂಧದಲ್ಲಿ ಈ ವರೆಗೆ ಪೋಲಿಸ ಸಬ್ ಇನಸ್ಪೆಕ್ಟರ ಅಬ್ದುಲ್ ರಜಾಕರನ್ನೊಳಗೊಂಡ ೯೭ ಜನರನ್ನು ಬಂಧಿಸಿ ಅವರ ಮೇಲೆ ಪಿನಲ್ ಕೋಡಿನ ೧೪೭-೩೩೧ ಕಲಮುಗಳ ಅನ್ವಯ ಖಟ್ಲೆ ಹಾಕಿದ್ದಾರೆ,

---

ನಾಮದಾರ ಶಾಸ್ತ್ರಿಗಳ ತರುವಾಯ ಪಂಡಿತ ಹೃದಯನಾಥ ಕುಂಜರುರವರು ಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು. ಈ ಉತ್ಸವಕ್ಕೆ ಮತ್ತು ಸಭೆಯವರ ಸಾಲ ತೀರಿಸಲಿಕ್ಕೆ ಧನಸಹಾಯ ಮಾಡಬೇಕೆಂದು ಕೋರಲಾಗಿದೆ.

ಧಾರವಾಡದ ಕಲೆಕ್ಟರರಾದ ಶ್ರೀ ವ್ಹಿ. ಟಿ. ದೆಹೆಜಿಯಾ ಇವರು ಪುಣೆಯ ಕಲೆಕ್ಟರ ಮತ್ತು ಜಿಲ್ಹಾ ಮ್ಯಾಜಿಸ್ಟ್ರೇಟರಾಗಿ ವರ್ಗಾಯಿಸಲ್ಪಡಲಿರುವರೆಂದು ವಿಶ್ವಸನೀಯವಾಗಿ ತಿಳಿಯುತ್ತದೆ. ಈ ಸ್ಥಳಕ್ಕೆ ನೇಮಿಸಲ್ಪಡುವ ಮೊದಲನೆ ಹಿಂದೀಯರು ಇವರೇ ಇರುವರು.

## ಕರ್ನಾಟಕ ವಿಶ್ವವಿದ್ಯಾಲಯ ಬಗ್ಗೆ ಕಮೀಟಿ ನೇಮಕ

### ಸರಕಾರದ ಪ್ರಕಟನೆ

ಕರ್ನಾಟಕಕ್ಕೆ ಸ್ವತಂತ್ರ ವಿಶ್ವವಿದ್ಯಾಲಯವು ಇರಬೇಕೆಂದು ಸರಕಾರವು ಉತ್ಸುಕವಾಗಿದ್ದು ಭಾವೀ ವಿಶ್ವವಿದ್ಯಾಲಯದ ಸ್ವರೂಪ ಹಾಗು ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಚಾರ ಮಾಡಿ ವರದಿ ಒಪ್ಪಿಸಲು ಮುಂಬೈ ಸರಕಾರವು ಶೀಘ್ರದಲ್ಲಿಯೆ ಕಮೀಟಿ ನೇಮಿಸಲು ಯೋಚಿಸಿದೆ ಎಂದು ಸುದ್ದಿ ಖಾತೆ ಡಾಯರೆಕ್ಟರರು ಪ್ರಕಟನೆ ಹೊರಡಿಸಿದ್ದಾರೆ.

ಪ್ರಾಂತದಲ್ಲಿ ಪ್ರಾದೇಶಿಕ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವ ತತ್ವವನ್ನು ಸರಕಾರವು ಈಗಾಗಲೆ ಮಾನ್ಯ ಮಾಡಿದೆ. ಪ್ರಾದೇಶಿಕ ವಿಶ್ವವಿದ್ಯಾಲಯ ಬೇಡಿಕೆ ಮಹಾರಾಷ್ಟ್ರ ಜನರಿಂದ ಮೊದಲು ಮುಂದೆ ಬಂತು ಹಾಗು ಸರಕಾರದವರು ಮಹಾರಾಷ್ಟ್ರ ವಿಶ್ವವಿದ್ಯಾಲಯದ ಪ್ರಶ್ನೆ ಸಂಬಂಧದಲ್ಲಿ ವಿಚಾರ ಮಾಡಲು ಡಾ. ಜಯಕರರ ಅಧ್ಯಕ್ಷತೆಯಲ್ಲಿ ಕಮೀಟಿ ನಿಯಮಿಸಿದರು. ಕಮೀಟಿಯ ವರದಿ ಬಂದ ಮೇಲೆ ಸರಕಾರವು ಪುಣೆಯಲ್ಲಿ ವಿಶ್ವವಿದ್ಯಾಲಯ ಸ್ಥಾಪಿಸುವ ಅವಶ್ಯಕತೆಗೆ ತತ್ವತಃ ಒಪ್ಪಿಗೆ ಜಾಹೀರ ಮಾಡಿತು.

ಗುಜರಾಥದಲ್ಲಿಯ ಶಿಕ್ಷಣಜ್ಞರೂ ಇತರರೂ ಗುಜರಾಥ ವಿಶ್ವವಿದ್ಯಾಲಯ ಸಂಬಂಧದಲ್ಲಿ ಪ್ರಾಸ್ತಾವಿಕ ಕಾರ್ಯ ನಡೆಸಿರುವದು ಸರಕಾರಕ್ಕೆ ತಿಳಿದುಬಂದಿದೆ ಎಂದು ಅದರಲ್ಲಿ ಉಲ್ಲೇಖಿಸಿರುವರು.

## ಸಂಯುಕ್ತಪ್ರಾಂತ

ಜಿ. ಡಿ. ಬಿರ್ಲಾ ಇವರು ಬನಾರಸದಲ್ಲಿ ಭಾರತ ಕಲಾಭವನದವರಿಗೆ ವಸ್ತು ಸಂಗ್ರಹಾಲಯ ಕಟ್ಟಲು ೧ ಲಕ್ಷ ರೂಪಾಯಿ ಕೊಟ್ಟಿದ್ದಾರೆ.

ರಾಮಲೀಲಾ ಮೆರವಣಿಗೆಯು ಕೆಲ ಬೀದಿಗಳಲ್ಲಿ ಹಾಯಬಾರದೆಂದು ಸಬ್ ಡಿವಿಜನಲ್ ಮ್ಯಾಜಿಸ್ಟ್ರೇಟರು ಹಾಕಿದ ನಿರ್ಬಂಧವನ್ನು ಮುರಿದು ಸತ್ಯಾಗ್ರಹ ಮಾಡಿದ್ದರಿಂದ ಅಲಹಾಬಾದದ ಸನ್ಯಾಸಿಗಳೂ ಧರ್ಮಗುರುಗಳೂ ಆದ ಪಂಡಿತ ಪ್ರಭುದತ್ತ ಬ್ರಹ್ಮಚಾರಿಯವರು ೧೨ ಜನರೊಂದಿಗೆ ಸೆರೆಹಿಡಿಯಲ್ಪಟ್ಟಿದ್ದಾರೆ.

ಅಲಹಾಬಾದದ ಗಲಭೆ ಭಾಗದಲ್ಲಿ ಸರಕಾರದವರು ಆರು ತಿಂಗಳು ಸಶಸ್ತ್ರ ಪೋಲೀಸರ ಎರಡು ಬ್ಯಾಟೇಲಿಯನ್ ಇಡಲು ನಿರ್ಧರಿಸಿದ್ದಾರೆ. ಈ ಬಗ್ಗೆ ಬರುವ ೧೦೬ ಸಾವಿರ ರೂಪಾಯಿ ವೆಚ್ಚವನ್ನು ಅಲ್ಲಿನ ಹಿಂದೂ ಮುಸಲ್ಮಾನರಿಂದ ವಸೂಲ ಮಾಡಲಾಗುವದು.

## ಬಂಗಾಲ

ಕಲಕತ್ತೆಯ ಬೆಂಟಿಂಕ ಬೀದಿಯಲ್ಲಿ ೧೩ ನೇ ತಾರೀಕು ಮುಂಜಾನೆ ಒರ್ವ ಪ್ರಮುಖ ಹಿಂದೀ ಜವಳಿ ವ್ಯಾಪಾರಿಯ ವಖಾರಕ್ಕೆ ಬೆಂಕಿ ಹತ್ತಿತ್ತು. ೧೦ ಅಗ್ನಿ ಶಾಮಕ ಯಂತ್ರಗಳು ಕೂಡಿ ೧॥ ಗಂಟೆಗಳಲ್ಲಿ ಬೆಂಕಿ ನಂದಿಸಿದವು. ೧೦ ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಹಾನಿಯಾಗಿದೆ.

ಕಲಕತ್ತೆಯಲ್ಲಿ ಗಲಭೆ ಸಂಬಂಧದಲ್ಲಿ ಕೊಲೆ ಲೂಟಿ ಮೊದಲಾದ ವಿಶೇಷ ಆರೋಪಗಳ ಮೇಲೆ ಈ ವರೆಗೆ ೬೦೦೦ ಜನರ ಬಂಧನವಾಗಿದೆ.

ಸಣಬಿನ ಧಾರಣೆ ಸಂಬಂಧದಲ್ಲಿ ಹಿಂದುಸ್ತಾನ ಸರಕಾರದ ನಿರ್ಣಯವನ್ನು ಬಂಗಾಲ ಸರಕಾರ ಪ್ರತಿಭಟಿಸುವದೆಂದು ಬಂಗಾಲ ಮುಖ್ಯ ಮಂತ್ರಿ ಸುಹರವರ್ದಿಯವರು ಹೇಳಿದರು. ಹಿಂದುಸ್ತಾನ ಸರಕಾರ ತನ್ನ ಧೋರಣವನ್ನು ಬದಲಿಸುವವರೆಗೆ ಸಣಬನ್ನು ಯಾರಿಗೂ ಮಾರದೆ ತಮ್ಮ ಹತ್ತರವೆ ಇಟ್ಟುಕೊಳ್ಳಬೇಕೆಂದು ತಾವು ರೈತರಿಗೆ ಉಪದೇಶಿಸಿರುವದಾಗಿಯೂ ಅವರು ನುಡಿದರು.

## ಬಿಹಾರ

ಯಾವದೇ ರಾಜಕೀಯ ಅಪರಾಧ ಮಾಡಿದವನು ಸರಕಾರಿ ನೌಕರಿಗೆ ಅಪಾತ್ರನಾಗುವದಿಲ್ಲೆಂದು ಬಿಹಾರ ಸರಕಾರ ಸಾರಿದೆ.



## ಸಂಪಾದಕ ಪರಿಷತ್ತಿನ ಸ್ಥಾಯೀ ಸಮಿತಿಯ ಸಭೆ

### ಮಹತ್ವದ ನಿರ್ಣಯಗಳು

### ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ಸರದಾರ ಆಶ್ವಾಸನ

ಅಖಿಲ ಭಾರತ ಸಂಪಾದಕ ಪರಿಷತ್ತಿನ ಸ್ಥಾಯಿ ಸಮಿತಿಯ ಸಭೆ ಹೊಸದಿಲ್ಲಿಯಲ್ಲಿ ಅಧ್ಯಕ್ಷ ಶ್ರೀ ತುಷಾರ ಕಾಂತಿಘೋಷರ ಅಧ್ಯಕ್ಷತೆಯಲ್ಲಿ ಜರುಗಿತು. ಅಧ್ಯಕ್ಷರ ಬಿನ್ನಹದ ಮೇರೆಗೆ ನಡುಗಾಲ ಸರಕಾರದ ಗೃಹ ಹಾಗು ಸುದ್ದಿ ಖಾತೆಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಭಾಷಣ ಮಾಡಿ ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ಕೆಲ ಮಾತುಗಳನ್ನು ಹೇಳಿದರು. ಅಧ್ಯಕ್ಷರು ಸರದಾರರನ್ನು ಸ್ವಾಗತಿಸುತ್ತ "ನಾವು ಇಂದು ಒತ್ತಾಳಿಕೆಯಿಂದ ಸ್ವಾತಂತ್ರ್ಯದ ನಿರಾಶೆಯಿಂದ ಸಿದ್ಧಿಯ ಮಹತ್ತರವಾದ ಹೊಸ್ತಿಲಿನಲ್ಲಿರುವೆವು. ಅವರ್ಣನೀಯ ಕಷ್ಟ ಹಾಗು ಅಪರಿಮಿತ ತ್ಯಾಗದಿಂದ ಕೂಡಿದ ಹಿಂದೀ ವೃತ್ತಪತ್ರಗಳ ಬೆಳವಣಿಗೆಯ ಇತಿಹಾಸ ಹೇಳುವದು ನನ್ನ ಉದ್ದೇಶವಲ್ಲ. ಆದರೆ ಸಮೀಪದಲ್ಲಿ ಬಂದಿರುವ ಹಿಂದೀ ಸ್ವಾತಂತ್ರ್ಯ ಸಮರದಲ್ಲಿ ವೃತ್ತಪತ್ರಗಳು ತಮ್ಮ ಕರ್ತವ್ಯದಲ್ಲಿ ಚ್ಯುತವಾಗಿಲ್ಲೆಂದು ನಾವು ತಿಳಿಸಿದರೆ ಅಷ್ಟು ತಪ್ಪಾಗಲಿಕ್ಕಿಲ್ಲೆಂದು ಹೇಳಿದರು.

ಅನಂತರ ಅವರು ಹಿಂದೀ ಮುದ್ರಣ ಕಾಯದೆಯ ಸಂಬಂಧದಲ್ಲಿ ಹೀಗೆ ಹೇಳಿದರು. ಹಿಂದೀ ಮುದ್ರಣ ಕಾಯದೆ ಹಾಗು ಸಂಸ್ಥಾನಿಕರ ಸಂರಕ್ಷಣ ಕಾಯದೆಯನ್ನು ರದ್ದು ಮಾಡಬೇಕೆಂದು ಕೇಳಿಕೊಳ್ಳಲಾಗಿದೆ. ಜನತಾ ಚಳವಳಿಯಿಂದ ಭಯಭೀತರಾಗಿ ಆಳರಸರು ಈ ಕಾಯದೆಗಳನ್ನು ಮಾಡಿದರು. ಇವು ಪ್ರಜಾಸತ್ತೆಗೆ ಅನುಗುಣವಾಗಿಲ್ಲ. ಇವುಗಳನ್ನು ಇನ್ನೂ ಸಾಗಿಸಿಕೊಂಡು ಹೋಗುವದು ಅನಿಷ್ಟವಾಗಿದೆಂದು ಹೇಳುವ ಅವಶ್ಯಕತೆಯಿಲ್ಲ. ಈ ಕಾಯದೆಯನ್ನು ರದ್ದುಪಡಿಸಬೇಕೆಂದು ರಾಷ್ಟ್ರೀಯರು ಕೇಳುತ್ತ ಬಂದಿದ್ದು ನಡುಗಾಲ ಸರಕಾರ ತೀವ್ರ ಈ ದಿಸೆಯಲ್ಲಿ ಉಪಾಯ ಕೈಕೊಳ್ಳಬೇಕೆಂದು ಆಶಿಸುವೆ. ನಡುಗಾಲ ಸರಕಾರ ವಹಿಸಿಕೊಂಡ ಕಾರ್ಯದಲ್ಲಿ ನಮ್ಮ ಪೂರ್ಣ ಬೆಂಬಲವಿದ್ದು ಸರಕಾರವೂ ಪತ್ರಿಕೆಗಳೂ ನಿಜವಾದ ಸಹಕಾರ ಹಾಗು ಐಕ್ಯದಿಂದ ನಡೆಯುವ ಹೊಸ ಯುಗ ಬೇಗ ಬರಲೆಂದು ನಾವು ಹಾರಯಿಸುವೆವು ಎಂದು ಮುಂತಾಗಿ ಹೇಳಿದರು.

### ಸರದಾರರ ಭಾಷಣ

ಸರದಾರ ವಲ್ಲಭಭಾಯರು ಉತ್ತರ ಕೊಡುತ್ತ ಈ ರೀತಿ ಹೇಳಿದರು. ನಡುಗಾಲ ಸರಕಾರ ತನ್ನ ಕಠಿನ ಕಾರ್ಯದಲ್ಲಿ ವೃತ್ತಪತ್ರಗಳ ಸಹಕಾರ ಪಡೆಯಲು ಒಳ್ಳೆ ಉತ್ಸಾಹದಿಂದ ಕೂಡಿದೆ. ನಾವು ಪತ್ರಿಕಾ ಸ್ವಾತಂತ್ರ್ಯ ಮನ್ನಿಸಿ ಅದು ತನ್ನ ನ್ಯಾಯ್ಯ ಕಾರ್ಯ ನೆರವೇರಿಸುವಂತೆ ಸಹಾಯ ಮಾಡುವೆವು. ಪರಕೀಯ ಆಳಿಕೆಯಿಂದ ಸ್ವಾತಂತ್ರ್ಯದಲ್ಲಿ ನಾವು ಈಗ ಕಾಲಿಡುತ್ತಿರುವದರಿಂದ ಆಡಳಿತ ನಡೆಸಿಕೊಂಡು ಹೋಗುವಲ್ಲಿ ಪತ್ರಿಕೆಗಳು ನಮಗೆ ಸಹಾಯ ಮಾಡುವವೆಂದು ನಮ್ಮ ವಿಶ್ವಾಸವಿದೆ. ಸಾರ್ವಜನಿಕ ಅಭಿಪ್ರಾಯ ಪ್ರತಿಬಿಂಬಿಸಿ ಮಾರ್ಗದರ್ಶನ ಮಾಡುವದು ನಿಮ್ಮ ಹೊಣೆಗಾರಿಕೆಯಾಗಿದೆ. ನಿಮ್ಮ ವ್ಯವಸಾಯಕ್ಕೆ ಭೂಷಣವಾದ ಬಗೆಯಲ್ಲಿ ಮತ್ತು ದೇಶಕ್ಕೆ ಹಿತಕರವಾದ ರೀತಿಯಲ್ಲಿ ನೀವು ಕಾರ್ಯ ನಿರ್ವಹಿಸುವಿರೆಂದು ನಾವು ನಂಬಿದ್ದೇನೆ. ನಾಗರಿಕರ ಜೀವನ ಹಾಗು ಆಸ್ತಿಯನ್ನು ಸಂರಕ್ಷಿಸುವದು ಪ್ರತಿಯೊಂದು ಸರಕಾರದ ಆದ್ಯ ಕರ್ತವ್ಯವಾಗಿದೆ. ನಾವು ನಮ್ಮ ಅಂತರಿಕ ರಾಜಕೀಯ ಹಾಗು ಇತರ ಮತಭೇದಗಳನ್ನು ಬಲ ಇಲ್ಲವೆ ಹಿಂಸೆಯಿಂದ ಬಿಡಿಸಲಿಕ್ಕೆ ಸದೆ ಮಾತುಕತೆ ಹಾಗು ಮನವರಿಕೆಯಿಂದ ಬಿಡಿಸಬೇಕು ಅದರಿಂದ ಶಕ್ಯವಾಗದೆ ಹೋದರೆ ಪಂಚಾಯತಿಯಿಂದ ಬಗೆಹರಿಸಬೇಕು. ಜನರಲ್ಲಿ ಈ ತತ್ವವನ್ನು ಬಿಂಬಿಸಿ ವೃತ್ತಪತ್ರಿಕೆಗಳು ಮಹತ್ವದ ಸಹಾಯ ಮಾಡುವವೆಂದು ಮುಂತಾಗಿ ಹೇಳಿದರು.

### ವೃತ್ತಪತ್ರಗಳ ಹೊಣೆ

ಸುದ್ದಿ ಪ್ರಕಟಿಸುವಲ್ಲಿ ಹಾಗು ಅಭಿಪ್ರಾಯ ವ್ಯಕ್ತಮಾಡುವಲ್ಲಿ ಪತ್ರಿಕೆಗಳಿಗೆ ಅನಿರ್ಬಂಧ ಸ್ವಾತಂತ್ರ್ಯವಿರುವದು ಅವಶ್ಯವಿದೆ. ಆದರೆ ಇದರೊಂದಿಗೆ ವೃತ್ತಪತ್ರಗಳ ಮೇಲೆಯೂ ಒಂದು ಹೊಣೆ ಉಂಟು. ಸರಕಾರದ ನ್ಯಾಯ್ಯ ಚಟುವಟಿಕೆಗಳಿಗೆ ಬೆಂಬಲ ಕೊಡಬೇಕು ಮತ್ತು ಪ್ರಸಂಗ ಬಂದಾಗ ಒಡಕಿನ ಬಲಗಳನ್ನು ಪರಾಭವಗೊಳಿಸುವಲ್ಲಿ ವಿಧಾಯಕ ಹಾಗು ನಿಷೇಧಾತ್ಮಕ ಎರಡೂ ಬಗೆಯಲ್ಲಿ ಸರಕಾರಕ್ಕೆ ಸಹಾಯ ಸಲ್ಲಿಸಬೇಕು. ಪುಂಡಾಟಿಕೆ ಘಟನೆಗಳನ್ನು ನಿರುತ್ಸಾಹಗೊಳಿಸಬೇಕು. ಕ್ಷೋಭವುಂಟಾಗಿ ಪರಿಸ್ಥಿತಿ ಪ್ರಕ್ಷುಬ್ಧವಾದಾಗ ಅದನ್ನು ಹೇಳಿಕೆ ಮತ್ತು ಕೃತಿಗಳಿಂದ ಮತ್ತಷ್ಟು ಹೆಚ್ಚಿಸದಿರುವದು ಪ್ರತಿಯೊಬ್ಬ ಜವಾಬದಾರ ನಾಗರಿಕನ ಕರ್ತವ್ಯವಿರುವದು; ಹಿಂಸೆಯ ಪ್ರಚೋದನೆ ಎಂದೂ ಸಹನವಾಗದು. ಆದರೆ ಅಪ್ರತ್ಯಕ್ಷವಾಗಿ ಹಿಂಸೆಯನ್ನು ಪ್ರಚೋದಿಸುವ ಲೇಖನ ರೀತಿಯೂ ಒಂದುಂಟು. ಅದು ಬಹಳ ಅನಿಷ್ಟವಾಗಿದೆ. ನೀವು ಇವೆರಡನ್ನೂ ಬಿಟ್ಟುಗೊಡುವಿರೆಂದು ನನ್ನ ನಂಬಿಗೆಯಿದೆಂದು ಮುಂತಾಗಿ ಹೇಳಿದರು.

ಅನಂತರ ಅವರು ಮುದ್ರಣ ಕಾಯದೆಯ ಸಂಬಂಧದಲ್ಲಿ ಹೇಳುತ್ತ ನೀವು ಕೇಳಿಕೊಂಡಂತೆ ವೃತ್ತಪತ್ರ ಪ್ರತಿನಿಧಿಗಳನ್ನೊಳಗೊಂಡ ಸರಕಾರ ಮತ್ತು ಸರಕಾರೇತರರ ಸಮಿತಿಯೊಂದನ್ನು ನೇಮಿಸಿ ಮುದ್ರಣ ಕಾಯದೆಯ ಪುನರ್ವಿಮರ್ಶೆ ಮಾಡಿಸಲು ಸರಕಾರದ ಆಕ್ಷೇಪ ಇಲ್ಲೆಂದು ಹೇಳಿದರು.

ಅನಂತರ ಸುರೇಶ ಮುಜುಮುದಾರರು ಬಂಗಾಲ ಪರಿಸ್ಥಿತಿ ಸಂಬಂಧದಲ್ಲಿ, ಸರಕಾರಿ ಧೋರಣದಲ್ಲಿ ಏಕಸೂತ್ರತೆ ಬೇಕೆಂದು ಸರ್ ಫ್ರಾನ್ಸಿಸ್‌ಲೋ ಇವರು, ಪತ್ರಿಕಾವ್ಯವಸಾಯದಲ್ಲಿನ ಬಂಡವಲುಗಾರರ ದಾಳಿಯ ಸಂಬಂಧದಲ್ಲಿ ಶ್ರೀ ಮಣಿಯವರು, ಅಖಿಲ ಭಾರತ ಆಕಾಶವಾಣಿ ಕಾರ್ಯಕ್ರಮ ರಚಿಸುವಲ್ಲಿ ಪ್ರಾಂತಗಳ ಸಲಹೆ ತೆಗೆದುಕೊಳ್ಳಬೇಕೆಂದು ಶ್ರೀ ಮೊಹರೆ ಹಣಮಂತರಾಯರು ಹೇಳಿದರು.

ಸರದಾರರು ಉತ್ತರ ಕೊಡುತ್ತ, ಕೇಂದ್ರ ಸರಕಾರ ಮತ್ತು ಪ್ರಾಂತಿಕ ಸರಕಾರಗಳ ಸಂಬಂಧವನ್ನು ತಿಳಿಸಿ ಪರಸ್ಪರ ವಿಶ್ವಾಸ ಹಾಗು ಸಹಕಾರದಿಂದ ವರ್ತಿಸಬೇಕೆಂದು ಕೇಳಿಕೊಂಡರು.

ಅನಂತರ ಗೊತ್ತುವಳಿಗಳು ಸ್ವೀಕೃತವಾದವು. ಮುಂದಿನ ವಾರ್ಷಿಕ ಅಧಿವೇಶನವನ್ನು ಬೃಹತ್ ಏಶಿಯಾ ಸಂಪಾದಕರ ಪರಿಷತ್ತು ಹಾಗು ಬೃಹತ್ ಏಶಿಯಾ ಬಾಂಧವ್ಯ ಪರಿಷತ್ತಿನ ಸಮಯದಲ್ಲಿ ದಿಲ್ಲಿಯಲ್ಲಿ ಮಾರ್ಚ ೧ ಕ್ಕೆ ಜರಗಿಸಬೇಕೆಂದು ಗೊತ್ತಾಯಿತು. ದಂಗೆಯ ಸುದ್ದಿ ಸಂಬಂಧದಲ್ಲಿ ಕೇಂದ್ರ ಸಲಹೆ ಸಮಿತಿಯವರ ಸೂಚನೆಗಳು ಸ್ವೀಕೃತವಾದವು. ಜಾತೀಯತೆಯನ್ನುದ್ರೇಕಿಸುವಂತೆ ಸುದ್ದಿ ಸಂಗತಿಗಳನ್ನು ಪ್ರಕಟಿಸಬಾರದೆಂದು ಗೊತ್ತಾಯಿತು. ಬಂಗಾಲ ಸರಕಾರ ಪತ್ರಿಕೆಗಳ ಮೇಲೆ ಹಾಕಿದ ನಿರ್ಬಂಧಗಳನ್ನು ನಿಷೇಧಿಸಲಾಯಿತು.

(೪ನೇ ಪುಟದಿಂದ)

### ಹಿಂದೀ ಸೈನ್ಯ

ನಡುಗಾಲ ಸರಕಾರದ ಸಂರಕ್ಷಣ ಮಂತ್ರಿಗಳಾದ ಸರದಾರ ಬಲದೇವಸಿಂಗರು ತಾ. ೯ ಕ್ಕೆ ಹಿಂದೀ ಸೈನಿಕರನ್ನುದ್ದೇಶಿಸಿ ಆಕಾಶವಾಣಿ ಭಾಷಣ ಮಾಡಿ ನಡುಗಾಲ ಸರಕಾರದ ಸಂರಕ್ಷಣ ಧೋರಣೆಯನ್ನು ವಿವರಿಸಿದರು ಹಿಂದೀ ಸೈನಿಕರ ಶೌರ್ಯ, ಅವರಲ್ಲಿ ಜಾತೀಯ ಲೇಶವೂ ಇಲ್ಲದಿರುವದು, ಇವುಗಳನ್ನು ಅವರು ಹೊಗಳಿದರು. ದೇಶದ ಮುಂದಿರುವ ಅನೇಕ ಆರ್ಥಿಕ ಮತ್ತು ಇತರ ಸಮಸ್ಯೆಗಳ ಪರಿಹಾರ ಮತ್ತು ಜಗತ್ತಿನಲ್ಲಿ ಹಿಂದುಸ್ತಾನದ ಹೆಸರು ಉಚ್ಚ ಸ್ಥಾನದಲ್ಲಿ ವಿರಾಜಿಸುವದು ಸಾಧ್ಯವಾಗಬೇಕಾದರೆ ರಾಷ್ಟ್ರದ ಭದ್ರತೆ ಮೊದಲ ಸಾಧಿಸಲ್ಪಡಬೇಕು ಎಂದು ಹೇಳಿ ಹಿಂದುಸ್ತಾನದ ಸೈನ್ಯದಲ್ಲಿ ಕೇವಲ ಹಿಂದೀಯರೆ ಇರಬೇಕು ಎಂಬ ಸೂತ್ರವನ್ನು ಮಂಡಿಸಿದರು ಹಿಂದೀ ಸೈನ್ಯದ ಉಚ್ಚ ದರ್ಜೆಗೆ ಭಂಗ ಬಾರದಂತೆ ಅದರ ರಾಷ್ಟ್ರೀಕರಣ ಮಾಡಲಾಗುವದೆಂದೂ ಆದರೆ ಹಿಂದೀ ಸೈನ್ಯಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸಿದ ಬ್ರಿಟಿಶ ಸೈನ್ಯಾಧಿಕಾರಿಗಳನ್ನು ಕಡೆಗಣಿಸುವದಿಲ್ಲವೆಂದೂ ಭರವಸೆಯಿತ್ತರು. ರಾಷ್ಟ್ರೀಯ ಸರಕಾರ, ರಾಷ್ಟ್ರೀಯ ಸೈನ್ಯವನು ಕಟ್ಟಬೇಕೆಂದು ಅವರು ಒತ್ತಿ ಹೇಳಿದರೂ ಹಿಂದುಸ್ತಾನಕ್ಕೆ ಪರಕೀಯರ ಮೇಲಿನ ಪ್ರಭುತ್ವ ಬೇಕಾಗಿಲ್ಲ, ಕೇವಲ ಭದ್ರತೆ ಬೇಕಾಗಿದೆಯೆಂದು ಸಾರಿದರು.

## ದಾನಶೂರ ರಾಜನಹಳ್ಳಿ ಪಿತಃ—ಪುತ್ರರು

ಧರ್ಮಪ್ರವರ್ತಕ ಶ್ರೀ ರಾಜನಹಳ್ಳಿ ಹನುಮಂತಪ್ಪನವರು

ಧರ್ಮಪ್ರವರ್ತಕ ರಾಜನಹಳ್ಳಿ ಹನುಮಂತಪ್ಪನವರ ಚಿರಂಜೀವರಾದ ರಾಮಶೆಟ್ಟರು

ಧರ್ಮಪ್ರವರ್ತಕ ರಾಜನಹಳ್ಳಿ ಹನುಮಂತಪ್ಪನವರು ದಾವಣಗೆರೆಯ ಸುಪ್ರಸಿದ್ಧ ಹತ್ತಿಯ ಅರಳೆಯ ವ್ಯಾಪಾರಿಗಳು ಶ್ರೀಯುತರು ಈಗಾಗಲೆ ಧರ್ಮಶಾಲೆ, ಕೋದಂಡ ರಾಮಸ್ವಾಮಿಯ ದೇವಸ್ಥಾನ, ಶ್ರೀಮತಿ ಸೀತಮ್ಮನವರ ಪ್ರೌಢ ವಿದ್ಯಾರ್ಥಿನಿಯರ ಶಾಲೆ, ಶ್ರೀಮತಿ ಗೋಪಮ್ಮನವರ ನರ್ಸರಿ ಸ್ಕೂಲು ಮೊದಲಾದ ಅನೇಕ ಸಂಸ್ಥೆಗಳಿಗೆ ಉದಾರ ದಾನವಿತ್ತು ದಾನಶೂರರೆಂದೆನಿಸಿಕೊಂಡಿರುವರು. ಅವರ ಮಕ್ಕಳಾದ ಶ್ರೀ ರಾಮಶೆಟ್ಟರು ತಂದೆಯವರ ಔದಾರ್ಯವನ್ನು ಅನುಸರಿಸಿ ಅನೇಕ ದಾನಗಳನ್ನು ಮಾಡಿದ್ದಾರೆ. ಶ್ರೀ ಹನುಮಂತಪ್ಪನವರು ಶೀಘ್ರದಲ್ಲಿಯೆ ಸ್ಥಾಪಿತವಾಗಲಿರುವ ಶ್ರೀ ರಾಮಶೆಟ್ಟಿ ಔದ್ಯೋಗಿಕ ಶಾಲೆಗೆ ೧೫೦೫೦೧ ರೂ. ದಾನವಿತ್ತಿರುವರು. ಧರ್ಮಪ್ರವರ್ತಕರ ಒಟ್ಟು ದಾನ ೩ ಲಕ್ಷವನ್ನು ಮಿಕ್ಕುವದು.

## ಮುಂಬಯಿ ಶಾಸನ ಸಭೆ

### ಮಹತ್ವದ ಮಸೂದೆಗಳ ಸ್ವೀಕಾರ

ಮುಂಬಯಿ ಶಾಸನ ಸಭೆಯು ಮಹತ್ವದ ಅಧಿವೇಶನ ೪೪ ದಿನಗಳ ವರೆಗೆ ಚರ್ಚೆ ನಡೆಸಿ ಮಹತ್ವದ ಮಸೂದೆಗಳನ್ನು ಸ್ವೀಕರಿಸಿ ೧೨ನೇ ತಾರೀಕಿನ ದಿವಸ ಅನಿಯಮಿತ ಅವಧಿಯ ವರೆಗೆ ಮುಂದರಿಯಿತು. ಈ ಸಲದ ಅಧಿವೇಶನದಲ್ಲಿ ಶಾಸನ ಸಭೆ ೧೮ ಮಸೂದೆಗಳನ್ನು ಸ್ವೀಕರಿಸಿತು. ಮುಂಬಯಿ ಔದ್ಯೋಗಿಕ ಬಾಂಧವ್ಯ ಮಸೂದೆ ಅತ್ಯಂತ ಮಹತ್ವದ್ದು. ಗಿರಣಿಗಾರ ಮತ್ತು ಕೂಲಿಗಾರರಲ್ಲಿ ಬಾಂಧವ್ಯವುಂಟಾಗಿ ದೇಶದ ಔದ್ಯೋಗಿಕ ಪ್ರಗತಿಯಾಗುವ ದೃಷ್ಟಿಯಿಂದ ಮುಂಬಯಿ ಸರಕಾರದವರು ಈ ಮಸೂದೆಯನ್ನು ಮಂಡಿಸಿದ್ದರು. ಆದರೆ ಇದಕ್ಕೆ ಗಿರಣಿಗಾರ ಪ್ರತಿನಿಧಿಗಳು ಮತ್ತು ಕೂಲಿಕಾರ ಪ್ರತಿನಿಧಿಗಳಿಬ್ಬರೂ ವಿರೋಧ ಮಾಡಿದರು. ಕೂಲಿಕಾರ ಪ್ರತಿನಿಧಿಗಳಾದ ಡಾಂಗೆಯವರು ಈ ಮಸೂದೆಯನ್ನು ಬಲವಾಗಿ ವಿರೋಧಿಸಿದರು. ಅಖಿಲ ಭಾರತವೆ ಅನುಸರಿಸತಕ್ಕ ಮಸೂದೆಯಿದು ಆದರೂ ತಮ್ಮ ರಾಜಕೀಯ ಉದ್ದೇಶ ಸಾಧನೆಗಾಗಿ ಹಲವರು ಮಿತಿಮೀರಿದ ಟೀಕೆ ಮಾಡಿದ್ದುಂಟು. ಮುಂಬಯಿ ಜಿಲ್ಹಾ ಪೋಲೀಸ ಕಾಯದೆ ಮತ್ತು ಮುಂಬಯಿನಗರ ಪೋಲೀಸ ಕಾಯದೆ ತಿದ್ದುಪಡಿ ಮಸೂದೆಗಳಿಗೆ ಲೀಗ ಸಭಾಸದರಿಂದ ಹಾಗು ಒಬ್ಬರೆ ಒಬ್ಬ ಕಮ್ಯುನಿಸ್ಟ ಸದಸ್ಯರಿಂದ ಬಹಳ ವಿರೋಧವುಂಟಾಯಿತು.

ಒಕ್ಕಲಿಗರ ಹಿತಕ್ಕೆ ಸಂಬಂಧಿಸಿದ ಎರಡು ಮಸೂದೆಗಳು ಈ ಅಧಿವೇಶನದಲ್ಲಿ ಸ್ವೀಕೃತವಾದವು. ಹೊಲ ಸಾಗುವಳಿ ಕಾಯದೆ ತಿದ್ದುಪಡಿ ಮಸೂದೆ ಮತ್ತು ಖೋತೀ ಕಾಯದೆ ತಿದ್ದುಪಡಿ ಮಸೂದೆ ಇವೆರಡೂ ಗೊತ್ತುವಳಿಗಳ ಬಗ್ಗೆ ವಿಶೇಷ ಚರ್ಚೆ ನಡೆಯಿತು. ಜಮೀನದಾರರು, ಲೀಗ ಪ್ರತಿನಿಧಿಗಳು ಈ ಮಸೂದೆಗಳ ಅನೇಕ ತಿದ್ದುಪಡಿಗಳಿಗೆ ವಿರೋಧ ಮಾಡಿದರು. ಆದರೂ ಪ್ರಚಂಡ ಬಹುಮತದಿಂದ ಎರಡೂ ಮಸೂದೆಗಳೂ ಸ್ವೀಕೃತವಾದವು. ಹಿಂದುಗಳಲ್ಲಿಯ ಬಹುಪತ್ನೀತ್ವ ಪ್ರತಿಬಂಧ ಮಸೂದೆಯನ್ನು ಮಾನ್ಯ ಮಾಡಿತು. ಈ ರೀತಿ ಮಹತ್ವದ ಅಧಿವೇಶನ ಪ್ರಾಂತದಲ್ಲಿ ಒಂದು ಬಗೆಯ ಸಾಮಾಜಿಕ ಕ್ರಾಂತಿಕಾರಕ ವಾತಾವರಣವನ್ನುಂಟು ಮಾಡಿ ಇದೇ ೧೨ನೇ ತಾರೀಕಿನ ದಿನ ಅನಿಯಮಿತ ಅವಧಿ ವರೆಗೆ ಮುಂದರಿಯಿತು.

## ಮುಂಬಯಿ ಮೇಲ್ಮನೆ

ಮುಂಬಯಿ ಮೇಲ್ಮನೆಯಲ್ಲಿಯೂ ಈ ಮಸೂದೆಗಳ ಚರ್ಚೆ ನಡೆಯಿತು. ಹೊಲ ಸಾಗುವಳಿ ಮಸೂದೆಯ ಬಗ್ಗೆ ಶ್ರೀ ಬೆಳವಿಯವರು ಮತ್ತು ನವಸಿಂಗರಾವ ಕಲ್ಲಾಪುರರು ಉಗ್ರ ಟೀಕೆ ಮಾಡಿ ಈ ಮಸೂದೆಯಿಂದ ರೈತ ಒಡೆಯರಲ್ಲಿ ಬಾಂಧವ್ಯ ಭಾವ ಅಳಿದು ಹೋಗುವದೆಂದು ಹೇಳಿ ಸರಕಾರದ ರೀತಿ ನೀತಿಗಳನ್ನು ಕಟುವಾಗಿ ಟೀಕಿಸಿದರು. ಮೇಲ್ಮನೆಯೂ ಅನಿಯಮಿತ ಅವಧಿಯ ವರೆಗೆ ಮುಂದರಿಯಿತು.

## ಸಂಪಾದಕೀಯ

(೩ನೇ ಪುಟದಿಂದ ಬಂದುದು)

ಒಡಂಬಡಿಕೆಯ ಕಾಲದಲ್ಲಿಯೇ ಮುಂದಿನ ಯುದ್ಧದ ಬೀಜಗಳು ಬಿತ್ತಲ್ಪಡುವವೆಂಬಂತೆ ಶಾಂತಿಯ ಬೀಜಗಳಾದರೂ ಅದೇ ಕಾಲಕ್ಕೆ ಬಿತ್ತಲ್ಪಡುವವು. ಎಂದು ಬ್ರಿಟಿಶ್ ಪರರಾಷ್ಟ್ರ ಮಂತ್ರಿ ಬೆವಿನ್‌ರು ಹೇಳುತ್ತ ನಾವಿನ್ನೂ ಕೆಲಸ ಮುಗಿಸಿಲ್ಲ. ಪ್ರಾರಂಭಿಸಿದ್ದೇವೆ ಎಂದು ಹೇಳಿದರು ಈ ಭಾಷಣಗಳಿಂದ ಬೇರೆ ಬೇರೆ ರಾಷ್ಟ್ರಗಳ ಒಲವು ಎಂತು ಇರುವದೆಂಬದು ಗೊತ್ತಾಗುವದು. ಏನೇ ಇದ್ದರೂ ಜಗತ್ತಿನ ಶಾಂತಿ ಸೌಹಾರ್ದ ಸಾಧಿಸಬೇಕಾದರೆ ಪ್ರಮುಖ ರಾಷ್ಟ್ರಗಳು ಸ್ವಾರ್ಥ, ಹುಲಿಗೆ, ಸಾಮ್ರಾಜ್ಯತ್ವದ ಧೋರಣವನ್ನು ಬಿಟ್ಟುಗೊಡಬೇಕಾದುದು ಅವಶ್ಯವೆಂದು ಸ್ಪಷ್ಟ ಹೇಳಬಯಸುತ್ತೇವೆ.

# ಮೈಸೂರು ಪ್ರತಿನಿಧಿ ಸಭೆಯಲ್ಲಿ ಮದ್ಯ ಪ್ರತಿಬಂಧ ಗೊತ್ತುವಳಿ

## ಈಸೂರು ಕೈದಿಗಳ ಬಿಡುಗಡೆಯ ಬೇಡಿಕೆ

### ದಸರಾ ಅಧಿವೇಶನದ ಮುಕ್ತಾಯ

ಮೈಸೂರು ಜಗನ್ಮೋಹನ ಭವನದಲ್ಲಿ ತಾ ೩೦ ಸಪ್ಟೆಂಬರದಿಂದ ನಡೆಯುತ್ತಿದ್ದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಅಧಿವೇಶನ ತಾ. ೧೩ ಆದಿತ್ಯವಾರ ಮಧ್ಯಾಹ್ನ ೧೨॥ ಗಂಟೆಗೆ ಮುಕ್ತಾಯಗೊಂಡಿತು.

ಸಮಾರೋಪ ಭಾಷಣದಲ್ಲಿ ದಿವಾಣ ಅಧ್ಯಕ್ಷರು ಮುಂದಿನ ವರ್ಷ ದಸರಾ ಅಧಿವೇಶನಕ್ಕೆ ಸರಿಯಾಗಿ ಪ್ರ. ಪ್ರ. ಸಭೆಗೆ ಸ್ವತಂತ್ರವಾದ ಕಟ್ಟಡವನ್ನು ಹೊಸದಾಗಿ ಸಿದ್ಧಗೊಳಿಸುವದಾಗಿ ತಿಳಿಸಿದರು.

### ನಿಲುವಳಿ ಮತ್ತು ಸಭಾತ್ಯಾಗ

ತಾರೀಕು ಒಂಭತ್ತನೆ ದಿನ ಶ್ರೀ ಬಸಪ್ಪ ಶೆಟ್ಟರು ಒಂದು ನಿಲುವಳಿ ಸೂಚನೆಯನ್ನು ಮಂಡಿಸಿದರು. ಹಾಸನ ಜಿಲ್ಹೆಯಲ್ಲಿ ಬಿತ್ತನೆಯ ಬೀಜಗಳನ್ನು ಒದಗಿಸಲು ಸರಕಾರ ತಪ್ಪಿದ್ದನ್ನು ಚರ್ಚಿಸುವದೇ ಅದರ ಉದ್ದೇಶವಾಗಿತ್ತು. ಅದರ ಮೇಲೆ ಒಂದೂವರೆ ತಾಸು ಚರ್ಚೆ ನಡೆದೊಡನೆ ಕಾಂಗ್ರೆಸ್ ಸದಸ್ಯರು ಚರ್ಚೆಯನ್ನು ಮುಗಿಸಿ ಮತಗಣನೆ ಮಾಡಬೇಕೆಂದು ಅಧ್ಯಕ್ಷರನ್ನು ಬಾರಿ ಬಾರಿಗೂ ಕೇಳಿಕೊಂಡರು. ಆದರೆ ಅಧ್ಯಕ್ಷರು ಮತ್ತು ಚರ್ಚೆಗೆ ಅವಕಾಶ ಕೊಡುತ್ತ ಹೋದುದನ್ನು ಪ್ರತಿಭಟಿಸಲು ಕಾಂಗ್ರೆಸ್ ಸದಸ್ಯರು ಸಭಾತ್ಯಾಗ ಮಾಡಿದರು. ದಿವಾಣ ಅಧ್ಯಕ್ಷರು ಇನ್ನೂ ಸಮಯ ಸಾಕಷ್ಟು ಇರುತಿರಲು ಕಾಂಗ್ರೆಸ್ಸಿಗರು ಅವಸರ ಪಡುತಿರುವದನ್ನು ಟೀಕಿಸಿ ಮತಗಣನೆ ಮಾಡಲು ನಿಲುವಳಿ ಸ್ವೀಕೃತವಾಗಿ ಸರಕಾರಕ್ಕೆ ಸೋಲಾಯಿತು.

ಇನ್ನೂ ಅನೇಕ ನಿಲುವಳಿ ಸೂಚನೆಗಳು ಬಂದಿದ್ದರೂ ಅವುಗಳಲ್ಲಿ ಹೆಚ್ಚಿನವುಗಳನ್ನು ಅಧ್ಯಕ್ಷರು ತಳ್ಳಿ ಹಾಕಿದರು. ಕೋಲಾರದಲ್ಲಿ ಮಾಲೀಕರ ಯಾಳುಗಳ ಸಂಪಿನಿಂದ ಹುಟ್ಟಿದ ಪರಿಸ್ಥಿತಿ, ಸಂಸ್ಥಾನದಲ್ಲಿ ಬಸ್ ಸರ್ವಿಸುಗಳಿಗೆ ನಿಯಮ ವಿರುದ್ಧ ಲಾಯಸೆನ್ಸ ಕೊಟ್ಟದ್ದು ಇತ್ಯಾದಿ ವಿಷಯಗಳು ನಿಲುವಳಿಯ ವಸ್ತುಗಳಾಗಿದ್ದವು.

### ಹಕ್ಕುಗಳ ಬಾಧ್ಯತೆ

ಕಳೆದ ಅಧಿವೇಶನದ ಕಾಲದಲ್ಲಿ ಸಭಾತ್ಯಾಗ ಮಾಡಿದ್ದ ಕಾಂಗ್ರೆಸ್ ಸದಸ್ಯರ ಒಂದು ದಿನದ ಭತ್ತೆಗೆ ಕತ್ತರಿಹಾಕಿದ್ದು ತಪ್ಪೆಂದು ಹಕ್ಕು ಬಾಧ್ಯತೆ ಸಮಿತಿಯವರು ಮಾಡಿದ್ದ ವರದಿ ತಾ ೧೦ ಕ್ಕೆ ಪ್ರತಿನಿಧಿ ಸಭೆಯಲ್ಲಿ ಸರ್ವಾನುಮತದಿಂದ ಅಂಗೀಕೃತವಾಯಿತು.

ಹಿಂದುಳಿದ ವರ್ಗಗಳ ಪರಿಸ್ಥಿತಿಯ ಸುಧಾರಣೆಗಾಗಿ ಸೂಚನೆ ಮಾಡಲು ವಿವಿಧ ಹಿಂದುಳಿದ ಜಾತಿಗಳ ಪ್ರತಿನಿಧಿಗಳಿಂದೊಡಗೂಡಿದ ಒಂದು ಸಮಿತಿಯನ್ನು ನಿರ್ಮಿಸಬೇಕೆಂಬ ಗೊತ್ತುವಳಿಯನ್ನು ತಾ ೯ ಕ್ಕೆ ಜಿ. ಎಂ. ಪುಟ್ಟಸ್ವಾಮಿಯವರ ಗೊತ್ತುವಳಿಯ ಮೇಲೆ ತಾ. ೧೦ ಕ್ಕೆ ಚರ್ಚೆ ನಡೆದು ಸರಕಾರದ ಸಹಾನುಭೂತಿಪರ ಉತ್ತರವನ್ನು ಅನುಲಕ್ಷಿಸಿ ಅದನ್ನು ಹಿಂತೆಗೆದುಕೊಳ್ಳಲಾಯಿತು.

### ಮದ್ಯಪಾನ ನಿರೋಧ

ಕಾಂಗ್ರೆಸ್ ಪಕ್ಷದ ಶ್ರೀ ಸಿ. ಕೃಷ್ಣರಾಯರು ಮೈಸೂರು ಸಂಸ್ಥಾನದಲ್ಲಿ ಬೇಗನೆ ಪೂರ್ಣ ಮದ್ಯಪಾನ ನಿರೋಧವನ್ನು ಜಾರಿಗೆ ತರಲು ಅವಶ್ಯವಾದ ಉಪಾಯಗಳನ್ನು ಕೈಕೊಳ್ಳಬೇಕೆಂದು ತಂದ ಗೊತ್ತುವಳಿ ತಾ. ೧೩ಕ್ಕೆ ಚರ್ಚಿತವಾಗಿ ಪಾಸಾಯಿತು. ಈಸೂರು, ಶ್ರವಣಬೆಳಗುಳಗಳಲ್ಲಿ ೧೯೪೨ ರಲ್ಲಾದ ಗಲಭೆಗಳ ಕೈದಿಗಳನ್ನು ಬಿಡುಗಡೆ ಮಾಡಬೇಕೆಂಬ ಕಾಂಗ್ರೆಸ್ ಗೊತ್ತುವಳಿಯೂ ಮುಸ್ಲಿಂ ಲೀಗಿನವರ ವಿರೋಧವಿದ್ದರೂ ಸ್ವೀಕೃತವಾಯಿತು.

ಬೆಂಗಳೂರು ದಂಡಿನ ಭಾಗದಲ್ಲಿ ಆದ ಗಲಭೆಗಳ ಸಂಬಂಧ ಕಾಂಗ್ರೆಸ್ ಪಕ್ಷದವರು ತರಬೇಕೆಂದು ಪ್ರಯತ್ನಿಸಿದ ನಿಲುವಳಿಗೆ ದಿವಾನರು ಸಾರ್ವಜನಿಕ ಹಿತದೃಷ್ಟಿಯಿಂದ ಅನುಮತಿ ಕೊಡಲಿಲ್ಲ.

ಸಮಾರೋಪ ಭಾಷಣದಲ್ಲಿ ದಿವಾಣರು, ಇನ್ನೂ ಅನೇಕ ನಿಲುವಳಿ ಗೊತ್ತುವಳಿಗಳು ಚರ್ಚಿಸಲಾಗದೆ ಉಳಿದಿದ್ದರೂ ಅವುಗಳ ವಿಚಾರವನ್ನು ಸರಕಾರ ಮಾಡುವದೆಂದು ಭರವಸೆ ಕೊಟ್ಟದ್ದಲ್ಲದೆ, ಮೂರನೆ ಅಧಿವೇಶನವನ್ನು ಕರೆಯುವ ಪ್ರಸ್ತಾವವೆತ್ತಿ ಫೆಬ್ರುವರಿಯಲ್ಲಿ ಸಭೆ ಕರೆಯುವ ಪ್ರಯತ್ನ ಮಾಡಲಾಗುವದೆಂದೂ ಆದರೆ ಯಾವಾಗಲೂ ಇದು ಸಾಧ್ಯವಾಗಲಿಕ್ಕಿಲ್ಲೆಂದೂ ತಿಳಿಸಿದರು.

## ಮೈಸೂರು-ಬೆಂಗಳೂರು

ಇದೇ ತಿಂಗಳ ೧೯—೨೦ ಕ್ಕೆ ಬೆಂಗಳೂರಲ್ಲಿ ಜರಗಬೇಕಾಗಿದ್ದ ಮೈಸೂರು ಸಂಸ್ಥಾನ ಕಾಂಗ್ರೆಸ್ಸಿನ ಅಧಿವೇಶನ ಮಳೆಯ ಮೂಲಕ ನವೆಂಬರ ೨-೩ಕ್ಕೆ ಮುಂದೆ ಬಿದ್ದಿದೆ. ಖಾದಿ ಹಾಗು ಸ್ವದೇಶೀ ಪ್ರದರ್ಶನವೂ ನವೆಂಬರ ೧ ಕ್ಕೆ ಮುಂದುವರಿಸಲ್ಪಟ್ಟಿದೆ.

ಬೆಂಗಳೂರು ದಂಡಿನಭಾಗದಲ್ಲಿ ತಾ ೧೧ಕ್ಕೆ ಅಕಸ್ಮಾತ ಜಾತೀಯ ದಂಗೆ ಸಂಭವಿಸಿತು. ದಂಡಿನ ಪ್ರದೇಶದಲ್ಲಿ ಸಿವಿಲ ಹಾಗು ಮಿಲಿಟರಿ ಭಾಗಗಳಲ್ಲಿ ಇದರಿಂದ ತಾ. ೧೭ ರ ವರೆಗೆ ಕರ್ಫ್ಯೂ ಆಜ್ಞೆಯನ್ನು ಜಾರಿಯಲ್ಲಿ ತರಲಾಯಿತು. ಇರಿತ ಹಲ್ಲೆಗಳು ಜರಗಿ ಮೊದಲನೆ ದಿನ ಮೂರು ಮರಣಗಳು ಸಂಭವಿಸಿದವು. ಕಾಂಗ್ರೆಸ್–ಲೀಗ್ ಸಂಸ್ಥೆಗಳೆರಡೂ ಈ ಘಟನೆಗಳ ಬಗ್ಗೆ ವಿಷಾದವನ್ನು ಪ್ರದರ್ಶಿಸಿ ಹಾಗು ಖಂಡಿಸಿ ಪ್ರಕಟನೆ ಹೊರಡಿಸಿದವು. ಈಗ ಪರಿಸ್ಥಿತಿ ಶಾಂತವಾಗಿದೆ. ಕರ್ಫ್ಯೂ ಹುಕುಮನ್ನು ಈಗ ಸ್ವಲ್ಪ ಸಡಿಲಿಸಲಾಗಿದೆ.

ಬೆಂಗಳೂರು ನಗರ ಕಾಂಗ್ರೆಸ್ ಸಮಿತಿಯ ಆಶ್ರಯದಲ್ಲಿ ಗಾಂಧೀ ರಥೋತ್ಸವವೊಂದು ತಾ. ೯ ಕ್ಕೆ ಗಾಂಧೀ ವಾರದ ಕೊನೆಯ ದಿನ ಮನೋಹರವಾಗಿ ಸಾಂಗವಾಯಿತು. ಬಾಪೂಜಿಯ ಪ್ರತಿಮೆಯನ್ನು ರಥದಲ್ಲಿಟ್ಟು ಎಳೆಯಲಾಯಿತು. ೭೮ ಸಮವಸ್ತ್ರ ಧಾರಿಗಳಾದ ಸ್ವಯಂ ಸೇವಕರೂ ೭೮ ಜತೆ ವಿದ್ಯುದ್ದೀಪಗಳೂ ಗಾಂಧೀಜಿಯ ೭೮ ಹುಟ್ಟು ಹಬ್ಬದ ದ್ಯೋತಕವಾಗಿ ಶೋಭಿಸುತಿದ್ದವು.

ಮೈಸೂರು ಶ್ರೀ ಮನ್ಮಹಾರಾಜರಿಗೆ ತಾ ೧೦ ನೆ ದಿನ ಒಂದು ಕನ್ಯಾರತ್ನ ಜನಿಸಿತು. ಈ ಸಂತೋಷ ಸುದ್ದಿಯನ್ನು ದಿವಾಣರು ಪ್ರತಿನಿಧಿ ಸಭೆಯಲ್ಲಿ ಜಾಹೀರು ಗೊಳಿಸಿದರು. ಸಂತೋಷ ಪ್ರದರ್ಶನಾರ್ಥ ೨೧ ತೋಫುಗಳನ್ನು ಹಾರಿಸಲಾಯಿತು. ಪ್ರತಿನಿಧಿ ಸಭೆಯಲ್ಲಿ ಮಹಾರಾಜರನ್ನು ಅಭಿನಂದಿಸುವ ಗೊತ್ತುವಳಿ ಕಾಂಗ್ರೆಸ್ ಪಕ್ಷದವರಿಂದ ಮಂಡಿಸಲ್ಪಟ್ಟು ಸರ್ವಾನುಮತದಿಂದ ಸ್ವೀಕೃತವಾಯಿತು.

ಕಾರ್ಕಳದಲ್ಲಿ ದಿನಾಂಕ ೬ ರಲ್ಲಿ ದಕ್ಷಿಣ ಕನ್ನಡ ಜಿಲ್ಹೆಯ ಕಾಂಗ್ರೆಸ ಕೆಲಸಗಾರರ ಪರಿಷತ್ತು ಶ್ರೀ ಕೆ. ಬಿ. ಜಿನರಾಜ ಹೆಗಡೆಯವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಜಿಲ್ಹೆಯ ಗ್ರಾಮ ಸುಧಾರಣೆಯ ಬಗ್ಗೆ ಒಂದು ಸಂಘವನ್ನು ಸ್ಥಾಪಿಸಬೇಕೆಂದು ಗೊತ್ತಾಯಿತು. ಈ ಸಂಘದ ವತಿಯಿಂದ ಜಿಲ್ಹಾ ಬೋರ್ಡಿನ ಚುನಾವಣೆಗೆ ಹುರಿಯಾಳುಗಳನ್ನು ನಿಲ್ಲಿಸಬೇಕೆಂಬ ತೀರ್ಮಾನವಾಗಿ ಈ ಬಗ್ಗೆ ಸಮಿತಿ ರಚಿತವಾಯಿತು.

ಮದ್ರಾಸ ಗವರ್ನರರಾದ ಸರ್ ನೈಯವರು ಮಡಿಕೇರಿಯಿಂದ ಮಂಗಳೂರಿಗೆ ಆಗಮಿಸಿ ಕೈಗಾರಿಕೆ ಕೇಂದ್ರ ಹಾಗು ಆಹಾರ ಸಮಿತಿಗಳನ್ನು ಸಂದರ್ಶಿಸಿದರು. ಗವರ್ನರರಿಗೆ ಪರಿಸ್ಥಿತಿಯನ್ನು ನಿವೇದಿಸಲು ಇಲ್ಲಿ ಸಭೆ ಸೇರಿಸಲೆತ್ನಿಸಿದ ಕಮ್ಯುನಿಷ್ಟ ಧುರೀಣರನ್ನು ಬಂಧಿಸಿ ಸಾಯಂಕಾಲ ಬಿಡಲಾಯಿತು.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರಪೇಟೆ

ತಾ. ೧೬

ಮುಂಬಯಿ ಶೇರ ಪೇಟೆಯಲ್ಲಿ ಈ ವಾರ ಬೆಲೆಗಳ ಓಡಾಟ ಬಹಳ ತೀವ್ರವಾಗಿರಲಿಲ್ಲ. ರಾಜಕೀಯ ವಾತಾವರಣದ ಅನಿಶ್ಚಿತ ಸ್ವರೂಪ ಇದಕ್ಕೊಂದು ಕಾರಣವಾಗಿದ್ದಿರಬೇಕು. ಟಾಟಾ ಡೆಫರ್ಡ ಪಾಲುಗಳು ೩೦೩೦-೦-೦ ರಿಂದ ೩೦೫೦-೦-೦ ಕ್ಕೇರಿ ೩೦೧೭-೮ ಕ್ಕೆ ಬಂದಿವೆ. ಮುಂಬಯಿ ಡಾಯಿಂಗ ೩೦೯೦-೦-೦ ಕ್ಕೇರಿ ೩೦೭೦-೦-೦ ಕ್ಕೆ ಮರಳಿತು. ಫಿನ್ಲೆ ೪೩೮ ಕ್ಕೇರಿ ೪೩೪-೦-೦ ಕ್ಕೂ ಕೋಹಿನೂರು ೧೧೮೯-೦-೦ ರ ವರೆಗೇರಿ ೧೧೧೦-೦-೦ ಕ್ಕೂ ಸ್ವದೇಶಿ ೮೦೭-೦-೦ ರ ವರೆಗೇರಿ ೮೮೪-೦-೦ ಕ್ಕೂ ಗೋಕಾಕ ೪೩೫-೦-೦ ಕ್ಕೇರಿ ೪೨೫-೦-೦ ಕ್ಕೂ ಸೆಂಟ್ರಲ ಇಂಡಿಯಾ ೪೪೫-೦-೦ ರಿಂದ ೪೩೫-೦-೦ ಕ್ಕೂ ಇಳಿದವು. ಸಿಂಧ್ಯ ಸ್ಟೀಮ ೫೦-೩-೦ ಕ್ಕೇರಿ ೪೯-೧೨-೦ ಕ್ಕೂ, ಅಸೋಸಿಯೇಟೆಡ ಸಿಮೆಂಟ್ಸ ೨೪೯-೦-೦ ರಿಂದ ೨೪೭-೦-೦ ಕ್ಕೂ ಇಳಿದವು. ಬ್ಯಾಂಕ್ ಪಾಲುಗಳಿಗೆ ಹೆಚ್ಚು ಬೆಂಬಲವಿದ್ದು ೧೩೫-೮-೦ ರಿಂದ ಸೆಂಟ್ರಲ ಬ್ಯಾಂಕು ೧೩೭-೦-೦ ಕ್ಕೇರಿ ೧೩೬-೦-೦ ಗೆ ಬಂದರೆ ಇಂಪೀರಿಯಲ್ ಎಸ್. ಸಿ. ೨೯೨೫-೦– ರಿಂದ ೨೯೯೨-೮-೦ ಗೇರಿ ೨೯೭೫-೦-೦ ಕ್ಕಿಳಿಯಿತು. ರಿಜರ್ವ ಬ್ಯಾಂಕ ಮಾತ್ರ ೧೬೦-೦-೦ ರಿಂದ ೧೫೯-೦-೦ ಕ್ಕೆ ಬಂತು.

ಸರಕಾರಿ ಭದ್ರತೆಗಳಲ್ಲಿ ಜಿ. ಪಿ. ನೋಟು ೧೦೪-೧೩-೦ ರಿಂದ ೧೦೪-೮-೦ ಕ್ಕಿಳಿದು ೧೦೪-೧೧-೦ ಕ್ಕೆ ಸುಧಾರಿಸಿತು. ೩॥% -(೧೯೪೭-೫೦) ಸಾಲ ೧೧೨-೪-೦ ರಲ್ಲಿ ಸ್ಥಿರವಾಗಿದೆ.

### ಬೆಳ್ಳಿ—ಚಿನ್ನ

ಚಿನ್ನದ ಬೆಲೆಗಳು ಈ ವಾರ ಸ್ವಲ್ಪ ಮಾತ್ರ ಮೇಲೆ ಕೆಳಗೆ ಸಂಚರಿಸಿದವು. ಆದರೆ ಅವು ಇಳಿಯುವ ಧೋರಣೆ ತೋರಲಿಲ್ಲ. ಅದು ೧೦೦-೮-೦ಯ ಪರಮಾವಧಿಯನ್ನು ೧೦೦—೦— ರೂಪಾಯಿಯ ಕನಿಷ್ಠಾವಧಿಯದ್ದು ಮೀರಲಿಲ್ಲ. ವಾಯಿದಾ ೯೨—೧—೦ ಸಾವರೀನ ೬೯—೧—೦ ಬೆಳ್ಳಿಯ ಬೆಲೆ ಮಾತ್ರ ಬಹಳ ಇಳಿಯಿತು. ತಯಾರಿ ಬೆಳ್ಳಿ ೧೭೧-೦-೦ ರಿಂದ ೧೬೩-೧೪-೦ ಕ್ಕೆ ಬಂತು. ಹೊಸ ಬೆಳ್ಳಿ ೧೫೪-೧೪-೦

### ಅರಳೆ

ಹೊಸ ಜನವರಿ ಅರಳೆ ೪೪೪—೦—೦ ವರೆಗೇರಿದರೂ ಈ ವಾರದಲ್ಲಿ ಅದು ತುಸು ಹಿಂದೆ ಬಿದ್ದು ೪೪೧—೪—೦ ಕ್ಕಿಳಿಯಿತು. ಈ ಬೆಲೆ ಕಳೆದ ವಾರಕ್ಕಿಂತ ಹೆಚ್ಚೆಂದು ಮರೆಯಲಾಗದು ಮಾರ್ಚ ೪೫೦—೪—೦ ಮೇ ೪೫೯-೧೨-೦.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೨-೦-೦ |
| ಅಗಸಿ | ೨೩-೧೦-೦ |
| ಅಗಸಿ ಎಣ್ಣೆ | ೧೫-೮-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪-೧೬ |
| ಅರಿಷಣ ಹೇರು | ೯೦-೯೩ |
| ಶೇಂಗಾ ಖಂಡಿ ,, | ೯೦-೯೨ |
| ಮೆಣಸಿನಕಾಯಿ ಹೇರು ,, | ೧೩೦-೧೪೦ |
| ಮಿರ್ಜಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ಕ್ಕೆ | ೩೫-೩೭ |
| ,, ,, ೨ | ೩೨-೩೪ |
| ರಾಜಾ ಅಲವು | ೩೦-೩೪ |
| ಬೆಟ್ಟೆ | ೨೩-೨೪ |
| ಪಂತಿ | ೨೫-೨೬ |
| ನುಲಿ | ೩೫-೩೭ |
| ತೊರಸಾಲು | ೩೦-೩೫ |
| ಮೆಣಸು | ೨೩-೨೪ |

ಅಡಿಕೆಗೆ ಗಿರಾಕಿಯಿದೆ. ಕಡೂರ ಕಡೆಯಿಂದ ಹೊಸ ಅಡಿಕೆ ತೊರಸಾಲು ಪೇಟೆಗೆ ಬರುತ್ತಿದೆ.

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೫-೨೯೦ |
| ,, | ನಂ. ೨ | ೨೭೫-೨೮೦ |
| ,, | ನಂ. ೩ | ೨೬೫-೨೭೦ |
| ಅಪ್ಲಂಡ ಹತ್ತಿ | | ೨೬೫-೨೭೦ |
| ಜಿನ | | ೨೦೦-೨೦೫ |
| ಸಾಜಿನ | | ೨೦೦ |
| ಡಬಲರೋಲ | | ೧೯೫-೨೦೫ |

## ದಕ್ಷಿಣ ಕನ್ನಡ

ಉಡುಪಿಯ ಕರ್ನಾಟಕ ಸಂಘದ ೨ ನೆಯ ವರ್ಧಂತಿ, ವಿವಿಧ ಕಾರ್ಯಕ್ರಮಗಳಿಂದ ಜರುಗಿತು. ವರ್ಧಂತ್ಯುತ್ಸವವು ಶ್ರೀ ಟಿ. ಮಾಧವ ಪೈ ಗಳ ಅಧ್ಯಕ್ಷತೆಯಲ್ಲಿಯೂ ಸಾಹಿತ್ಯೋತ್ಸವವು ಶ್ರೀ ಆರ್. ವಿ. ಜಾಗಿರದಾರರ ಅಧ್ಯಕ್ಷತೆಯಲ್ಲಿಯೂ ಸಾಂಗವಾದವು. ಮರುದಿನ ಶ್ರೀ ವಿ. ಸೀ. ಹಾಗು ಜಾಗಿರದಾರರ ಅಧ್ಯಕ್ಷತೆಗಳಲ್ಲಿ ಕಾರ್ಯಕ್ರಮಗಳು ಜರುಗಿದವು. ಮೂರನೆಯ ದಿನ ಶ್ರೀ ರಾಜರತ್ನಂ ಜಿ. ಪಿ. ಅವರ ಅಧ್ಯಕ್ಷತೆಯಲ್ಲಿ ನರೇಗಲ್ಲರ ಕಾವ್ಯ ವಾಚನವಾದ ಬಳಿಕ ಸಂಜೆಯಲ್ಲಿ ಶ್ರೀ ಕುಡ್ವರ ಅಧ್ಯಕ್ಷತೆ ಶ್ರೀ ಅನಂತ ಪದ್ಮನಾಭರಾಯರ ಹಾಗು ಉಗ್ರಾಣರ ಕಾವ್ಯ ವಾಚನವಾಯಿತು. ನಾಲ್ಕನೆಯ ದಿನ ಶ್ರೀ ಅನಂತ ಪದ್ಮನಾಭರಾಯರ ಅಧ್ಯಕ್ಷತೆಯಲ್ಲಿ ಕಾವ್ಯ ಗಾಯನವಾದ ಮೇಲೆ ಎನ್. ಎಸ್. ಕಲ್ಲೆಯವರು ಯಕ್ಷಗಾನ ಕುರಿತು ಭಾಷಣ ಮಾಡಿದರು. ಕೊನೆಯ ದಿನ ಶ್ರೀ ಕೆ. ಬಿ. ಜಿನರಾಜ ಹೆಗಡೆಯವರ ಅಧ್ಯಕ್ಷತೆಯಲ್ಲಿ ಶ್ರೀ ಕಟೀಲ ಗಣಪತಿ ಶರ್ಮರ ಉಪನ್ಯಾಸವಾಯಿತು ಶ್ರೀ ಕೆ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಡೆದ ಲೇಖಕರ ಪ್ರಕಾಶಕರ ಸಮ್ಮೇಲನದಲ್ಲಿ ದ. ಕನ್ನಡ ಲೇಖಕರ ಬರಹಗಳನ್ನು ಸಂಗ್ರಹಿಸಿ ಪ್ರಕಟಿಸಲು ಒಂದು ಸಮಿತಿ ಸ್ಥಾಪಿಸಲಾಯಿತು.

ದಕ್ಷಿಣ ಕನ್ನಡ ಜಿಲ್ಹಾ ಲೇಖಕರ ಹಾಗು ಪ್ರಕಾಶಕರ ಸಮ್ಮೇಲನದಲ್ಲಿ ಶ್ರೀ. ರಾಜಗೋಪಾಲ ಕೃಷ್ಣರಾಯರು ಲೇಖಕ ಪ್ರಕಾಶಕರ ಆರ್ಥಿಕ ದರಿದ್ರತೆಯನ್ನು ಹೇಳಿ ಅದರ ಸುಧಾರಣೆಗೆ ಒಂದು ಸಂಘದ ಅವಶ್ಯಕತೆಯನ್ನು ತಿಳಿಸಿದರು. ಶ್ರೀ. ಜಿನರಾಜ ಹೆಗಡೆಯವರು ಪ್ರಾಥಮಿಕ ಮಾಧ್ಯಮಿಕ ವಿದ್ಯಾರ್ಥಿಗಳಿಗೆ ಒಂದೇ ಒಂದು ಪಠ್ಯಪುಸ್ತಕ ಶ್ರೇಣಿಯನ್ನು ಸರಕಾರ ರಚಿಸಿ ಭಾಷಾಧ್ಯಾಪಕರ ವೇತನ ಸ್ಥಾನಗಳನ್ನು ಸುಧಾರಿಸಬೇಕೆಂದರು. ಬಳಿಕ ಪ್ರಲ್ಹಾದರಾಯ ನರೇಗಲ್ಲರು ಉತ್ತರ ಕರ್ನಾಟಕದ ಲೇಖಕರ ಆರ್ಥಿಕ ಸುಧಾರಣೆಯ ಚಳವಳಿಯನ್ನು ನಿರೂಪಿಸಿದರು. ಸಮ್ಮೇಲನದಲ್ಲಿ (೧) ಪ್ರಾದೇಶಿಕ ಭಾಷೆಗಳನ್ನು ಕಲಿಸುತ್ತಿರುವ ಅಧ್ಯಾಪಕರ ವೇತನ ಸ್ಥಾನಗಳನ್ನು ಉತ್ತಮಗೊಳಿಸಬೇಕೆಂದು ಕೇಳುವ (೨) ಜಿಲ್ಹಾ ಪತ್ರಿಕೆಯ ಸಂಚಾಲಕರು ಉಪಲೇಖಕರಿಗೆ ಪ್ರತಿಫಲ ಕೊಡಲು ಕೇಳುವ, (೩) ಈ ಪ್ರಾಂತದ ಎಲ್ಲ ಕನ್ನಡ ಭಾಗಗಳಲ್ಲಿ ಒಂದೇ ಬಗೆಯ ಪಠ್ಯಪುಸ್ತಕಗಳಿರಬೇಕೆಂದು ಸೂಚಿಸುವ, (೪) ಜಿಲ್ಹೆಯ ಲೇಖಕರ, ಪ್ರಕಾಶಕರ. ಮತ್ತು ಮಾರಾಟಗಾರರ ಅಭಿವೃದ್ಧಿಗಾಗಿ ಒಂದು ಸಂಘ ಸ್ಥಾಪಿಸುವ ಹಾಗು ಇನ್ನೂ ಕೆಲವು ಗೊತ್ತುವಳಿಗಳಾದವು.



# ಶ್ರಾವಣ ಮಾಸದ ಕತೆಗಳು

(ಕಲಾಮಂಡಪ ಬೆಳಗಾವಿ)

ಓ! ಬಂತು ಶ್ರಾವಣಾ......... ಎಂದು ಕವಿವರ್ಯ ಬೇಂದ್ರೆಯವರೇ ಹಾಡಬೇಕೆಂತಿಲ್ಲ. ಶ್ರಾವಣ ಮಾಸದಲ್ಲಿಯ ನಮ್ಮ ಕತೆಗಳ ಬೆಳವಣಿಗೆಯನ್ನು ನೋಡಿದರೆ ಯಾರಾದರೂ ಹಾಡಬಹುದು. ಹೋದ ತಿಂಗಳ ನಮ್ಮ ಕತೆಯಲ್ಲಿ ಬೆಳೆಗಿಂತ ಕಳೆಯೇ ಹೆಚ್ಚೆಂದು ಬರೆದ ಮಾತು ಇಷ್ಟರಲ್ಲಿ ಪಲ್ಲಟಿಸುವದು ಸಂತೋಷದ ಸಂಗತಿಯು. ಈ ಸಾರೆಯ ಕತೆಗಳಲ್ಲಿ ಉತ್ತಮ ಕತೆಗಳು ಮನಸಿಗೆ ತೃಪ್ತಿಯಾಗುವಷ್ಟಿವೆ.

ಶ್ರಾವಣ ಮಾಸದಲ್ಲಿ ಒಟ್ಟು ೬೩ ಕತೆಗಳ ಬಂದಿವೆ. ಅವು—

| | |
|---|---|
| ಅನುವಾದ ಕತೆಗಳು...... | ೯ |
| ಪ್ರೇಮ ಕಾಮದ ಕತೆಗಳು...... | ೨೫ |
| ಧ್ಯೇಯವಾದಿಗಳು......... | ೨೩ |
| ರೂಪಕ.................. | ೨ |
| ಬಡತನ, ನಗೆ, ಇತರ......... | ೧೪ |
| | ೬೩ |

ಉಳಿದವೆಲ್ಲ ಶ್ರಾವಣ ಮಾಸದ ಪಟ್ಟದ ಸ್ವತ್ತಯವು.

ರಶಿಯದ ಕ್ರಾಂತಿಪುರುಷ ಗೋರ್ಕಿಯು ತನ್ನ ಜನಾಂಗದ ಸಂಬಂಧ ಒಂದು ಉತ್ಕೃಷ್ಟ ಮಾತನ್ನು ಹೇಳಿರುವನು. ಆ ಮಾತು ಅದು ಸಾಹಿತ್ಯಕ್ಕೂ ಜೀವನಕ್ಕೂ ಹೊಂದುವಂಥದು. ನಮ್ಮ ಸಾಹಿತಿಗಳು ಆ ಮಾತನ್ನು ನೆನಸಲ್ಲಿಟ್ಟಿರಬೇಕು. ಅದು In Russ even fools are original. ರಶಿಯನ್ನರ ಊಟ ದಾಟ, ವೇಷ ಭಾಷೆ, ರೀತಿ ನೀತಿ, ದೇವ ಧರ್ಮ ಒಟ್ಟಿನ ಎಲ್ಲವೂ ನಾವೀನ್ಯ-original ಮಾಯವಾದವು. ಅದಕ್ಕಾಗಿಯೇ fools ಸಹ original. ರಶಿಯನ್ನರ ಹುಚ್ಚರು ಮಾನವ ಜನಾಂಗದ ಹುಚ್ಚರಂತಲ್ಲ.

ನಮ್ಮ ಕಥಾಪ್ರಪಂಚದಲ್ಲಿ ನಾವು ಬಯಸುವದು ಈ originality ಯನ್ನು ಆದರೆ ಪ್ರೇಮ ಕಾಮದ ೨೫ ಕತೆಗಳು ಈ ಹಿಂದೆ ಹೇಳುತ್ತ ಬಂದಂತೆಯೇ ಇವೆ. ಪ್ರೇಮ ಇಲ್ಲವೆ ಕಾಮದಿಂದ ಹೊರಟ ಕತೆಯು ಒಂದಿಷ್ಟು ಗೊಂದಲದಲ್ಲಿ ಹಬ್ಬಿ ಸಿದ್ಧಿಯಲ್ಲಾಗಲಿ, ಅಸಿದ್ಧಿಯಲ್ಲಾಗಲಿ ಮುಕ್ತಾಯವನ್ನು ಸೇರುವದು. ಅದೇ ಧ್ಯೇಯವಾದಿಯ ಕತೆಗಳಲ್ಲಿ ನಾವೀನ್ಯದ ಜೀವ ದೊರೆಯುವವು. ಕುಂಟುಕರ-ವಿನ ಬಾಳು, ಬಿರುಗಾಳಿ, ಸ್ವಪ್ನ ಫಲ, ಪುತ್ರೋತ್ಸವ ಮೊದಲಾದವು. ಅತ್ಯುತ್ತಮ ನಾವೀನ್ಯದ್ದೆನಿಸಿದರೂ ಇಂಥ ಕತೆ "ಸಮಾಜ ಸ್ವಾಸ್ಥ್ಯ" ಮರಾಟಿ ಪತ್ರಿಕೆಯಲ್ಲಿ ಓದಿದಂತಿದೆ. ಅಲ್ಲಿಯ ಆ ಕತೆ (ಅದು ಸಹ ಫ್ರಾನ್ಸದ ಒಂದು ಕತೆಯ ಭಾಷಾಂತರ) ನಾವಿಕರ ಪ್ರಪಂಚವು ಹಿನ್ನೆಲೆಯಾಗಿ ನಿಂತು ಸತ್ಯಸೃಷ್ಟಿಯದೆನಿಸುವದು. ಇಲ್ಲಿ ಆ ಸತ್ಯದ ವಂಚನೆಯಾಗಿ ಅವಾಸ್ತವವೆನಿಸುವದು. ಬಿರುಗಾಳಿ ಒಂದಿಷ್ಟು ನಿಡಿದಾಗಿ ಕಂಡರೂ ಒಳ್ಳೆಯದು. ನಗೆಯು ಕತೆಯ ತುಂಬ ಹಾಸು ಹೊಕ್ಕಾಗಿ ಬೆರೆತು ಕೊಂಡಿದೆ. ಓಜದಲ್ಲಿ ಭಾವಕ್ಕೆ ಅನುಕೂಲವಾದ ಸುಂದರ ಭಾಷೆ, ಭಾಷೆಗೆ ಅನುಕೂಲವಾಗಿ ಕಥಾಚಮತ್ಕೃತಿ ಉತ್ಕೃಷ್ಟವಾಗಿದೆ. ವಾಚಕರು ಎಂಟು-ಆರು ಕಡೆಗೆ ಬಿಗಿಹಿಡಿದರೂ ಬಾಯಿ ತೆರೆದು ನಗಬೇಕು. ಆದರೆ ಪರಿಣಾಮದಿಂದ ಒಂದು ಮಾತನ್ನು ಹೇಳಹೊರಟರೆ-ಸಮಾಜದಲ್ಲಿ ಇದೇ ತಲೆಯೆತ್ತಬೇಕೆಂದು ಮಾಡಿದ ಸ್ತ್ರೀ ಸಮಾಜದ ರೀತಿ-ನೀತಿ-ಕಾರ್ಯ-ಕ್ಷೇತ್ರಗಳನ್ನು ಹೀಗೆ ಬರೆದು ಹೀಗಳೆಯುವದು ಪುರುಷನ ಸಂಕುಚಿತ ಭಾವನೆ ಎನಿಸುವದು.

### ಮತ್ತೆ ಕೆಲವು

ಶಂಕರನ ವರ

ಲೇ:— ಭೀಮನಗೌಡ ಪೋಲೀಸ ಪಾಟೀಲ

(ವಾಹಿನಿ)

ಕತೆಯು ಸಾರ- ಒಬ್ಬ ಕುರುಡ, ಒಬ್ಬ ಹೆಳವ ಒಂದು ಪೂಲಿನ ಎರಡೂ ಬದಿಗೆ ಕುಳಿತು ಭಿಕ್ಷೆ ಬೇಡಿ ಉಪಜೀವಿಸುತ್ತಿದ್ದರು. ಹೆಳವನು ಕುರುಡನ ಬೆನ್ನ ಮೇಲೆ ಕುಳಿತು ಭಿಕ್ಷೆ ಬೇಡ ಹತ್ತಿದನು. ಜನರು ದಯಾಭರಿತರಾಗಿ ಹಣ ಸಹಾಯ ಮಾಡಿದರು. ಕೆಲದಿನ ಸಮೃದ್ಧಿಯಾಗಿ ನಾಳಿದರು. ಕಡೆ ೧ ರೂಪಾಯಿ ಸಿಲುಕು ಉಳಿದಿತು. ಅದು ಯಾರ ಕಡೆಗಿರಲೆಂದು ಜಗಳ ಹುಟ್ಟಿತು. ಸ್ವಾರ್ಥ ಬೆಳೆದು ಶಂಕರರನ್ನು ಕೂಗಿದರು. ಅವನು ಬಂದ. ಅವರವರ ಇಚ್ಛೆಯಂತೆ ಹೆಳವ ಕುರುಡನಾದ. ಕುರುಡ ಹೆಳವನಾದ. ಕುರುಡ ಹೆಳವ, ಹೆಳವ ಕುರುಡ ಎಂದು ನಿರ್ಗತಿಕರು.

ಕತೆಯು ಶಂಕರನ ಅವತಾರವಾಗುವ ವರೆಗೆ ವಾಸ್ತವವಾಗಿ ಬೆಳೆದು ಬಂದಿದೆ. ಮುಂಬಯಿ ಸರಕಾರದ ಹಳೆಯ ಪಠ್ಯಪುಸ್ತಕದ ಒಂದು ಪಾಠವೇ ಕತೆಗೆ ಪ್ರಚೋದಕ. ರೂಪಾಯಿ ಸಂಗ್ರಹವಾದ ಮುಂದಿನ ವಿಷಯ ಹೊಸದು. ಆದರೆ ಶಂಕರನ ಅವತಾರ, ಅವರ ಇಚ್ಛೆಯಂತೆ ಉಭಯತರ ಇನ್ನೊಂದು ಅಂಗ ಗಲಿತವಾಗುವಂತೆ ಮಾಡುವ ಶಕ್ತಿ, ರೂಪಾಯಿ ಇಲ್ಲದಂತಾಗುವ ದೃಶ್ಯಗಳಿಂದ ರೂಪಕವೆನಿಸುವದು. ರೂಪಕವೆಂದು ತಿಳಿದರೆ-ಸ್ವಾರ್ಥದ ಪರಿಣಾಮ ಹೀಗೆಯೇ-ಎಂದು ಅರ್ಥವಾದೀತು. ಸಣ್ಣ ಕತೆಯೆಂದು ತಿಳಿದರೆ ಅವಾಸ್ತವವಾದೀತು ಕತೆಯು ಒಳ್ಳೆಯದು.

ಅಗ ಈಗ

ಲೇ:— ಕೈವಾರ ರಾಜಾರಾಮ

(ವಾಣಿ)

ಭೀಮು ಭೀಮನೆ ಸರಿ. ಇವನ ಗದರಿಕೆಗೆ ಹೆಂಡತಿ ಕ್ಷಯ ಹಿಡಿಯುವಳು. ಮುಂದು ತೀರಿಕೊಳ್ಳುವಳು. ಇನ್ನೊಬ್ಬಳನ್ನು ಮದುವೆಯಾಗುವನು. ಅವಳು ಸೊಗಸುಗಾತಿ. ತನ್ನ ಮನದ ಬಲವನ್ನು ಪೂರ್ತಿ ಮಾಡಿಕೊಳ್ಳುವದಕ್ಕೆ ಭೀಮನನ್ನು ಅನೇಕ ಬಗೆಯಾಗಿ ಕಾಡಹತ್ತಿದಳು ಭೀಮನು ಅದೆಲ್ಲವನ್ನು ತುಂಬಿ ತರಲು ಅಸಮರ್ಥ. ಕೊರಗಿ ಕೊರಗಿ ಸಣ್ಣಾದ. ಸಾಯುವಂತಾದ. ಇದೇ ಅಗ—ಈಗ.

ಜೀವನದಲ್ಲಿ ಇಂಥ ಗದರು-ಸ್ವಭಾವದ ಗಂಡಸರುಂಟು. ಮೊದಲನೆ ಹೆಂಡತಿಯನ್ನು ಕಾಡಿ ಎರಡನೆಯವಳಿಗೆ ದಾಸರಾಗುವವರ ಕತೆಯನ್ನು ಕತೆಗಾರರು ಮಾರ್ಮಿಕವಾಗಿ ಹೇಳಿರುವರು. ಕಿರುಗತೆ ಎನಿಸಿದರೂ ಮಾನವ ಸ್ವಭಾವದ ಒಂದು ಸೂಕ್ಷ್ಮಾಂಶವನ್ನು ತಿಳಿಯಾಗಿ ಹೇಳಿರುವದು.

ನನ್ನ ಸೋಲು

ಲೇ— ಸೊರಬ ಪುತ್ತೂರ

(ಕತೆಗಾರ)

ಮುಗಿದ ಯುದ್ಧ ಓದುತ್ತಿದ್ದೆ. ಆಕೆ ತಡ ಮಾಡಿದಳು. ಕೆನ್ನೆಗೆ ಛಾಡಿರೆಂದು ಹೊಡೆದು ಬಿಗಿದು ಎಲ್ಲಿಯೋ ಕುಳಿತಳು. ರಾತ್ರಿಯಾದರೂ ಕಾಣಲಿಲ್ಲ. ನನಗೆ ಒಂದಿಷ್ಟು ಗಾಬರಿ. ಹುಡುಕಿದೆ. ಭಾವಿಯಲ್ಲಿ ಬಿದ್ದಿರಬೇಕೆಂದು ಸಂಶಯ. ನೀರು ಅಲುಗಾಡಿದಂತೆ ಕಂಡಿತು. ಹಾರಿದು. ಹೃದಯ ದವಡಿಸಹತ್ತಿತು. ಇಳಿಯ ಹೋದೆ. ಹಿಂದಿನಿಂದ ಇದೆಲ್ಲವನ್ನು ಕಂಡ ಆಕೆ ಕರೆದಳು. ಇದೇ ನನ್ನ (ಕತೆಗಾರರ) ಸೋಲು.

ಇಲ್ಲಿ ಪುರುಷನ ಸ್ವಚ್ಛಂದ ದರ್ಪವೂ ಸ್ತ್ರೀಯ ಪವಿತ್ರ ಹೃದಯದ ಶಾಂತವೃತ್ತಿಯೂ ಮಿಂಚಿನಂತೆ ಸುಳಿದಿದೆ. ಕತೆ ಚಿಕ್ಕದಾದರೂ ಪರಿಣಾಮಕಾರಿಯಿದೆ.

ಕೀಳರಿಮೆ

ಲೇ— ಎಸ್. ವಿ. ಜೇವೂರ

(ಕರ್ನಾಟಕ ಬಂಧು)

ಇದೊಂದು ಕರುಣಾಮಯ ಕತೆ

ಶಂಕರ ಗುಮಾಸ್ತ. ತಂದೆ ಬೇನೆ ಬಿದ್ದಿರುವನೆಂದು ಮೇಲಧಿಕಾರಿಯ ಹತ್ತರ ರಜೆ ಬೇಡಿದ. ಮೇಲಧಿಕಾರಿ ಕೆಲಸದ ಒತ್ತಡದ ಮೂಲಕ ರಜೆ ಕೊಡಲಿಲ್ಲ. ಕೆಲಸ ಮುಗಿಸಿ ಹೋಗಬಹುದೆಂದು ಹೇಳಿದ. ಶಂಕರ ಒಂದಿನ ಹೆಚ್ಚು ನಿಂತು ಕೆಲಸ ಮುಗಿಸಿದ. ಕೊನೆಗೆ ರಜೆಯ ಕಾಗದ ಮುಂದೆ ಮಾಡಿದ. ರಜೆ ಮಂಜೂರ ಆಗಬೇಕು! ತಂದೆ ತೀರಿದ ತಂತಿ ಬಂದಿತು!! ತಂದೆಯ ದರ್ಶನಕ್ಕಾಗಿ ಬೇಡಿದ ರಜೆ ಉತ್ತರ ಕ್ರಿಯೆಗಾದರು ಉಪಯೋಗವಾಯಿತು.

ಈ ಕಥೆಯಲ್ಲಿ ಶಂಕರನ ಸಂಬಂಧ ತುಂಬ ಕನಿಕರ ಬರುವದು. ಮೇಲಧಿಕಾರಿಗಳ ಮೇಲೆ ರೋಷವೂ ಬರುವದು. ಆದರೆ ಇಂಥದೇ ಒಂದು ಕಥೆಯನ್ನು ಎನ್. ಸೂರಪ್ಪನವರು ಕತೆಗಾರ ಮಾಸಪತ್ರಿಕೆಯಲ್ಲಿ "ನನ್ನ ಸಂಘ" ಎಂಬ ಹೆಸರಿನಿಂದ ಈ ಮೊದಲು ಬರೆದಿರುವರು. ಮುಕ್ತಾಯ ಸಂತಸದಲ್ಲಿ ಕೊನೆಗೊಂಡಿದೆ. ಇಲ್ಲಿ ದುಃಖದಲ್ಲಿ ಕೊನೆಗೊಂಡಿದೆ. ಇದೊಂದರಿಂದ ಇದಕ್ಕೆ ಸ್ವತಂತ್ರ ಕತೆಯೆಂದು ಕರೆಯಬೇಕು.

### ಶ್ರಾವಣ ಪಟ

೧ ಮತದಾನ

ಲೇ:— ಎನ್. ಪ್ರಲ್ಹಾದರಾವ

(ಸುಬೋಧ)

ಕತೆಯು ಮಹಮ್ಮದ ಬಿನ್ ತುಘಲಖನಿಗೆ ಸಂಬಂಧಿಸಿದ ಐತಿಹಾಸಿಕ ಘಟನೆಯು. ಕತೆಯಲ್ಲಿ ಒಂದು ಸುಂದರವಾದ ಸನ್ನಿವೇಶವಿದೆ. ಆ ಸೃಷ್ಟಿಯ ವಿಲಕ್ಷಣ ಪುರುಷನನ್ನು ಪದಚ್ಯುತನನ್ನಾಗಿ ಮಾಡಬೇಕೆಂದು ಪ್ರಜೆಯೆಲ್ಲ ಕ್ಷೋಭೆಗೊಂಡು ನಿಂತಿದೆ. ಮುಖ್ಯ ಪ್ರಧಾನನು ಅರಸನಿಗೆ ಇದನ್ನು ತಿಳಿಸುವನು. ಅರಸನು ವಿಚಿತ್ರ ನಗೆಯನ್ನು ಬೀರುವನು. ಪ್ರಧಾನಿಯು ಅರಸನ ಸಮ್ಮತಿಯಂತೆ ಪ್ರಜೆಗಳೆಲ್ಲ ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಆಜ್ಞಾಪಿಸುವನು. ಪ್ರತಿಯೊಬ್ಬರು ತಮ್ಮ ಮತವನ್ನು ಒಂದು ಇಟ್ಟಂಗಿಯ ಮೇಲೆ ಬರೆದು ಪ್ರಕಟಿಸಲಿ ಎನ್ನುವನು. ಅದರಂತೆ ಪ್ರಜೆಗಳು ಗೊತ್ತು ಮಾಡಿದ ದಿನ ತಿಳಿಸುವರು. ಇನ್ನೇನು ಅರಸನು ಪದಚ್ಯುತನಾಗಬೇಕು! ತಥಾಪಿ ಅರಸನು ಆ ಇಟ್ಟಂಗಿಯ ರಾಶಿಯನ್ನು ನೋಡಿ ಸಂತೋಷಭರಿತನಾಗಿ ತನ್ನ ರಾಣಿಯ ಒಂದು ವಿಲಾಸ ಸೌಂದಿರವನ್ನು ಕಟ್ಟಿಸುವನು. ಅರಸನು ಪ್ರಜೆಗಳ ಕ್ಷೋಭೆಯ ಪರಿಣಾಮದಿಂದ ಒಂದು ಮಹಾಲು ಪಡೆದರೆ ಪ್ರಜೆಗಳು ಮತವನ್ನು ಪ್ರದರ್ಶಿಸಿ ಶಿಕ್ಷೆಗೆ ಗುರಿಯಾಗುವರು.

ಕತೆಯು ಅರಸನ ವಿಚಿತ್ರ ಸ್ವಭಾವದ ಒಂದು ಸುಂದರ ದೃಷ್ಟಾಂತವು. ಉದ್ವೇಕವೂ ಭಾಷೆ ಮಿತವಾಗಿ ಹಿತವಾಗಿ ಹುರಿಗೊಂಡು ಕುತೂಹಲವನ್ನು ದೂಡಿಕೊಂಡು ನಡೆಯುವವು. ಭಾವವು ಬೆಂಡಿನಂತೆ ತೇಲಿಕೊಂಡು ಬರುವವು. ಅರಸನ ವಿಚಿತ್ರ ನಡತೆ, ಪ್ರಧಾನಿಯ ಸಮತೋಲ ಬುದ್ಧಿ, ಪ್ರಜೆಗಳ ಕ್ಷೋಭೆ ಮುಪ್ಪುರಿಗೊಂಡ ಒಂದ ಘಟನೆಯಿಂದ ಒಂದು ಸುಂದರವಾದ ನಾಟಕವನ್ನು ಬರೆದರೆ ಕತೆಗಿಂತಲೂ ಹೆಚ್ಚು ಪರಿಣಾಮಕಾರಿಯಾದೀತು.

೨. ಮಲ ಮಗಳು

ಲೇ— ಶ್ರೀರಾಮ ಪಾಟೀಲ

(ಕರ್ಮವೀರ)

ಗೋಪಾಲನು ಹೆಂಡತಿಯನ್ನು ಕರೆಯಲಿಕ್ಕೆ ಮಾವನ ಮನೆಗೆ ಹೋದನು. ಹೆಂಡತಿಯ ದರ್ಶನವಿಲ್ಲ. ಅತ್ತೆಯ ಸಿಡಿಸಿಡಿ. ಹೆಂಡತಿಯ ಚಿತ್ರವನ್ನು ನೋಡಬೇಕೆಂದರೆ ಅದು ಸಹ ಇಲ್ಲ. ಕಡೆಗೆ ಹೆಂಡತಿ ಗೀತೆಯನ್ನು ಮನೆಗೆ ಕರೆದು ತಂದ. ಬೆಳಗಾವಿಯಲ್ಲಿ ನಿಂತ. ಸುಖವಾಗಿದ್ದರು. ಹೆಂಡತಿಯ ತಂಗಿಯ ಮದುವೆ. ಕೇವಲ ಆಮಂತ್ರಣ ಪತ್ರ. ಗಂಡ ಹೋಗಬಾರದೆಂದ. ಹೆಂಡತಿಯ ಆಗ್ರಹ. ಮುಂದೆ ಹೆಂಡತಿಯು ಬಸುರಿ. ಬಾಳಂತನಕ್ಕೆ ತಂದೆಯು ನೂರು ರೂಪಾಯಿ ಮನಿಯಾರ್ಡರ ಮಾಡಿದ. ಗೋಪಾಲನು ಬಿಟ್ಟ. ಹೆಂಡತಿಯು ಅಸ್ಪತ್ರಿಯಲ್ಲಿ ಹೆತ್ತಳು. ಹೆಣ್ಣು ಕೂಸು. ಆದರೆ ಸತ್ತಳು ಸಾಯುವ ಮುಂದೆ..ನೀನೂ ಮಲಮಗಳಾದಿಯಾ! ಎಂದು ಉದ್ಗಾರ ತೆಗೆದಳಂತೆ. ಗೋಪಾಲನು ಆಗದೆಂದು ಪ್ರತಿಜ್ಞೆ ಮಾಡಿದ.

ಕತೆಯಲ್ಲಿ ಗೀತೆಯು ಒಂದು ಅಪ್ರತಿಮ ಪವಿತ್ರ ಮೂರ್ತಿ. ಮಲತಾಯಿಯ ಮನೆಯಲ್ಲಿ ನೂರು ಸಂಕಟ ಬಂದರೂ ಬಾಯಿಬಿಚ್ಚಿದವಳಲ್ಲ! ತನ್ನ ದುರದೃಷ್ಟ ಒಂದನ್ನೇ ಶಪಿಸುತ್ತಾ ಬಂದವಳು. ತಾನು ಮಲಮಗಳಾದುದೇ ತಪ್ಪು. ಅದರಲ್ಲಿಯೂ ಒಳ್ಳೆಯ ಗಂಡ ಸಿಕ್ಕನೆಂಬುದೇ ಆ ಸಂಕಟದ ಮುಖ್ಯ ಗಂಗೆ. ಆದರೆ ದೈವ ಆಕೆಯನ್ನು ಇನ್ನಷ್ಟು ದಿನ ಬದುಕಿರಲು ಅಸ್ಪದಕೊಡನು. ಸಾಯುವ ಮುಂದೆ ಉಸಿರಿಡುವ ಅಜ್ಞಾನ ಮಾಂಸದ ಮುದ್ದೆ ಯಾದ ಶಿಶುವಿಗೆ-ನೀನೂ ಸಹ ಮಲಮಗಳಾಗಬೇಕೆ! ಎಂದು ಒಂದೇ ಒಂದು ಉದ್ಗಾರ! ಮೂರೇ ಮಾತಿನ ಆ ನುಡಿಯು ಹಿಂದೆ ಎಂಥ ಕಳವಳವಿದೆ! ಎಂಥ ದುಃಖವಿದೆ! ಎಂಥ ತಾಳ್ಮೆ ಇದೆ! ತನ್ನ ಉದ್ದನ್ನ ಬಾಳಿನ ಸಂಕಟದ ರಸಗಟ್ಟಿಯನ್ನು ಆ ಒಂದು ಶಬ್ದದಲ್ಲಿ ಒಡಮೂಡಿಯುವದು ಎಂಥ ಎದೆಗಾರಿಕೆ! ಆ ಮಾತನ್ನು ಹಿಗ್ಗಿಸಿದಷ್ಟು ಅರ್ಥಮಾಡಿಕೊಳ್ಳಬಹುದು. ಒಳ್ಳೆಯ ಕತೆ.

ಆದರೆ ಮುಖ್ಯ ಕತೆಗೆ ಪೋಷಕವೆಂದು ಹೇಳಹೊರಟ ಸಂಗತಿಗಳು ಬಹಳವೆನಿಸುವವು. ಕತೆಯು ಇದರಿಂದ ಅವಾಸ್ತವವಾಗಿ ಬೆಳೆದಂತೆನಿಸುವದು. ಗೋಪಾಲನಿಗೆ ಹೆಂಡತಿಯು ಮಲಮಗಳೆಂದು ತಿಳಿಯದ(ಂತೆ ಭಾಷೆಯನ್ನು ಬಳಸಿದ) ಸಂಗತಿಯು ಕೃತಕವೆನಿಸುವದು. ಮಲಮಗಳನ್ನು ಮಲತಾಯಿ ಕಾಡುವಳೆಂಬ ಮಾತನ್ನು ಬಹಳ ಸಾರೆ ಹೇಳಬೇಕಿಂತಿಲ್ಲ. ಗೀತೆಯ ಕೈಯನ್ನು ಗೋಪಾಲನು ಹಿಡಿದು 'ನಿನ್ನ ಭಾಗ್ಯ. ರೇಖೆಯು ತುಂಬ ಕಪ್ಪು ತುಂಬಿದೆಯಲ್ಲ' ಎಂದು ನುಡಿದ ಮಾತು ಸಾಕಲ್ಲವೇ! ಕತೆಗಾರನ ಸೂಕ್ಷ್ಮಾವಲೋಕನ ಇದಕ್ಕೂ ಹೆಚ್ಚಾಗಿ ಏನು ಬಯಸಬೇಕು!

೩ ಮೂವರು ಸಾಥಿಗಳು

ಲೇ:- ಶ್ರೀಕೃಷ್ಣ ಪಾಟೀಲ

(ಕರ್ಮವೀರ)

ಸುಕನ್ಯಾನ ಜೀವನಕ್ಕೆ ಕೊರತೆ ಏನು? ಕೈತುಂಬ ಹಣವನ್ನು ತಿಂಗಳು ತರುವ ಸುಶಿಕ್ಷಿತ, ಸುಸ್ವರೂಪ, ತನ್ನ ಒಲವಿಗೆ ಅನುಕೂಲವಾದ ಗಂಡ. ತನ್ನ ಬಾಳ್ಗಡಲಿಗೆ ಕೆನೆಗಟ್ಟಿ ನಿಂತಂತೆ ನಂದಿನಿ ಎಂಬ ಪುಟ್ಟ ಶಿಶು. ಶಾಂತಿ ಪುಷ್ಟಿ ತುಷ್ಟಿ ಮನೆಯಲ್ಲಿ ನೆಲೆಯೂರಿ ನಿಂತಿದೆ. ಒಂದಿನ ಗಂಡನ ಜೊತೆಗೆ ತಿರುಗಾಡಿಕೊಂಡು ಬರಲು ಬೈಲಿಗೆ ಹೋದಳು. ಅಲ್ಲೊಂದು ಮುದಿ ಆಕಳು ನಿರುಕಿಸಿ ನೋಡಹತ್ತಿತು. ಸುಕನ್ಯಾ ನೀರೊಂದು ತಿಳಿಯುವಳು. ಗಂಡನು ಚಿಕ್ಕಂದಿನಲ್ಲಿ ತಬ್ಬಲಿಯಾದ ನಿನಗೆ ಹಾಲು ಕೊಟ್ಟ ನಿನ್ನ ತಾಯಿ ಅನ್ನುವನು. ಅದು ಯೋಗ್ಯವಾದ ಮಾತು. ಕಟುಕರ ಕೈಯಿಂದ ಬಿಡಿಸಿ ತರಲು ಒತ್ತಾಯಪಡಿಸುವಳು. ಗಂಡ ಬೇಡೆಂದು ಎಷ್ಟು ಹೇಳಿದರೂ ಕೇಳಳು. ಒತ್ತಾಯದಿಂದ ಕಳಿಸುವಳು. ಇತ್ತ ತನ್ನ ಮನೆಯ

೧೬ನೇ ಪುಟಕ್ಕೆ




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಘಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಅಕ್ಟೋಬರ ೨೧ ರಿಂದ ೨೭ ರ ವರೆಗೆ

## ಮೇಷ

ನಿಮ್ಮ ಮತ್ತು ಮಕ್ಕಳ ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ಮತ್ತು ಮನೆಯಲ್ಲಿರುವ ನೋಕರ ಚಾಕರರಿಗೆ ಬಹಳ ಕ್ಲೇಶ. ಸ್ವೇಚ್ಛೆಯಿಂದ ನಡೆಯುವ ಅತಿಥಿಗಳು ಸೀಳಿಬಿಡುವರು. ಬಹುತರ ವಿಷಯಗಳಲ್ಲಿ ಇದ್ದರೂ ಇಲ್ಲದಂತೆಯೇ ಪ್ರಾಪಂಚಿಕ ಸುಖ. ಅಲ್ಪ ಸ್ತ್ರೀ ವಿಷಯದಲ್ಲಿ ಕುಬುದ್ಧಿ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಲಾಭದಲ್ಲಿ ಬಹಳ ಕೊರತೆ. ಹೆಂಡತಿಯ ಆಗ್ರಹ ಇಲ್ಲವೆ ಬಯಕೆಯನ್ನು ಪೂರೈಸುವಲ್ಲಿ ಹೆಚ್ಚು ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಮಧ್ಯಸ್ಥರ ಛಿತೂರಿಯಿಂದ ಬಹಳ ಗೊಂದಲ. ಪ್ರವಾಸ ಮತ್ತು ಪತ್ರವ್ಯವಹಾರವು ಭೆಟ್ಟಿಗಿಂತ ಹೆಚ್ಚು ಅನುಕೂಲ. ಆದರೆ ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೧, ೨೫, ೨೬ ಅನುಕೂಲ.

## ವೃಷಭ

ನಿಮ್ಮ ಪ್ರಕೃತಿ ಧಷ್ಟಪುಷ್ಟ. ಆದರೆ ಹೆಂಡತಿ ಮತ್ತು ಮಕ್ಕಳ ಆರೋಗ್ಯ ಕೆಟ್ಟದು. ಹಿರಿಯರಿಂದ ನಿಮ್ಮ ಕರ್ತೃತ್ವದ ತೀವ್ರ ಕಟ್ಟುಗಳಲ್ಲಿ ನಿಷೇಧ. ಹಕ್ಕಿಯ ಗೂಡ ಬೇಲಿಂತಲೆ ಅಡ್ಡ ಹಾದಿಯಿಂದ ವರ್ತನ ಮಾಡುವದು. ಉದ್ಯೋಗದಲ್ಲಿ ಅನುಕೂಲ ಪ್ರಗತಿ. ಆದರೆ ಏನೇನೋ ಸಾಹಸ ಮಾಡುವಲ್ಲಿ ಕೈಗೆ ಬಂದ ಲಾಭ ಬಹಳ ದೂರ ಹೋಗಿ ಸಿಕ್ಕಬೀಳುವ ಸಂಭವ. ಮಿತ್ರತ್ವದಲ್ಲಿ ಅನರ್ಥವಹ ವಿರೋಧ. ಅನವಶ್ಯಕ ಸಂಗತಿಯಲ್ಲಿ ಶೌರ್ಯ ತೋರಿಸಿದರೆ ಆಕಸ್ಮಿಕ ಸಂಗತಿಯಲ್ಲಿ ಗಾಬರಿಯಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿನ್ನೆಡುವದು. ಪ್ರವಾಸ ಅನುಕೂಲ. ಭೆಟ್ಟಿ ಸ್ವಲ್ಪ ತೊಂದರೆಯಿಂದಲೆ ಸಾಧ್ಯವಾಗುವ ಯೋಗ. ಆದರೆ ಪತ್ರವ್ಯವಹಾರ ಬಹಳ ತೊಂದರೆಯದ. ರೋಹಿಣಿಯ ಕೊನೆಯ ೩ ಮತ್ತು ಮೃಗಾರ್ದ ೧ ನೇ ಚರಣಕ್ಕೆ ತೊಂದರೆ ಹೆಚ್ಚು. ತಾ. ೨೨, ೨೩, ೨೭ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಮಕ್ಕಳ ವರ್ತನೆಯಿಂದ ಉಭಯತರ ಮನಸ್ಸು ವ್ಯಗ್ರವಾಗುವಿಕೆ. ಹೊರಗಿನಂತೆ ಮನೆಯಲ್ಲಿಯೂ ಶತ್ರುಗಳ ಉಪದ್ರವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಅಂದಾಜಿನಷ್ಟೆ. ಆದರೆ ಪ್ರತಿಯೊಂದು ಸಂಗತಿಯ ಸಿದ್ಧಿ ಸಾಧ್ಯ ಮಾಡುವದಕ್ಕೆ ದ್ರಾವಿಡ ಪ್ರಯತ್ನ ಮಾಡಬೇಕಾಗುವದು. ಖರ್ಚು ಮಿತಿಯಿದ್ದು, ಬಹಳ ಚೈನಿಯಲ್ಲಿ ಇಲ್ಲವೆ ಹೆಂಡತಿಯನ್ನು ಸಂತುಷ್ಟಗೊಳಿಸುವಲ್ಲಿ ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಆಪತ್ಕಾಲಕ್ಕೆ ನಿಮ್ಮ ಅತಿ ಮೋಹದ ಬಂಧು ಅಪೇಕ್ಷಿಯಾಗುವದು. ಮಿತ್ರರಿಂದ ವಚನಭಂಗ. ಹೆಂಡತಿಗೂ ಶತ್ರುತ್ವ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಹೆಚ್ಚು. ತಾ. ೨೧, ೨೫, ೨೬ ಅನುಕೂಲ.

## ಕರ್ಕ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಉತ್ತಮ. ಆದರೆ ಉಭಯತರಲ್ಲಿ ಕಲಹದ ರಸಿಕತೆ ಬಹಳ. ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ತೊಂದರೆಯಿಂದಲೆ. ವಾಹನ ಸುಖ ದೊರಕುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಸಾಧಾರಣವೆ. ಆದರೆ ಲಾಭ ತಂಬ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಸ್ಥಾನದಲ್ಲಿ ಸ್ವಲ್ಪ ಅನನುಕೂಲ ಸಾಹಸಗಳು. ಮಿತ್ರಸುಖ ಉತ್ತಮ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೧, ೨೨, ೨೩, ೨೭ ಅನುಕೂಲ.

## ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣ ಅನುಕೂಲ. ಆದರೆ ನಿಮಗೆ ಅಪ್ರಿಯವೆನಿಸುವಂತೆ ಹೆಂಡತಿ ಪಂಥ ಹಿಡಿದದ್ದರಿಂದ ಅವಳಿಗೂ ಬಹಳ ಸಂಕಟ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಅನವಶ್ಯಕ ವೆಚ್ಚದಿಂದ ಮನಸ್ತಾಪ ಕಾಯುವದೇ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿನ್ನೆಡುವದು. ಮಿತ್ರ ಸುಖ ಅನುಕೂಲ. ಮಕ್ಕಳಲ್ಲಿ ಬಹಳ ಉತ್ಕರ್ಷ. ಆದರಂತೆಯೆ ಒಬ್ಬರ ಅಪಕರ್ಷವಾಗುವದರಿಂದ ಮನಸ್ಸು ಸುಖ ದುಃಖಗಳ ಆಂದೋಲನದಲ್ಲಿ ಒಂದೇಸವನೆ ಓಡಾಡಬೇಕಾಗುವದು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾದ ೧ ನೇ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೨, ೨೩, ೨೪, ೨೫ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀ ಸುಖವೂ ಉತ್ತಮ. ಆದರೆ ಕೆಲ ವಿಶೇಷ ಪ್ರೀತಿಯ ವಸ್ತು ಕಳವಾಗಿ ಹೋಗುವದರಿಂದ ಇಲ್ಲವೆ ನಾಶವಾಗಿ ಹೋಗುವದರಿಂದ ಮನೆಯಲ್ಲಿಯ ಬಹುತರ ಜನರ ಮನಸ್ಸು ಅಸ್ವಸ್ಥ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಒಳ್ಳೆ ಜೋರಿನಲ್ಲಿ. ಆದರೆ ಅನವಶ್ಯಕ ವೆಚ್ಚವೂ ವಿಪರೀತ. ಮಿತ್ರರಲ್ಲಿ ಒಬ್ಬರಗೂಡ ಪ್ರತ್ಯಕ್ಷವಾಗಿ ಬಾಯಿಬಾಯಿ ಹತ್ತುವದು. ಇಲ್ಲವೆ ಕೆಲ ಪ್ರಸಂಗದಲ್ಲಿ ಕೈಕೈ ಹತ್ತುವ ಸಂಭವವೂ ಇದೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಪ್ರವಾಸಾದಿ ಕೆಲಸ ಮನಸಿನಂತೆ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೫, ೨೬ ಅನುಕೂಲ.

## ತುಲಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಪ್ರಿಯ ಜನರ ಭೆಟ್ಟಿಯ ಸಮ್ಮರ್ದ. ಸ್ತ್ರೀವರ್ಗದಲ್ಲಿ ಸ್ವಲ್ಪ ಕಿಚ್ಚು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಪ್ರತಿಯೊಂದು ಕೆಲಸದಲ್ಲಿ ಅಲ್ಪಾಯಾಸದಿಂದ ಯಶಸ್ಸು. ಸಂತೋಷ ದ್ವಿಗುಣಿತ ಆಗುವಂತೆ ಕೆಲ ಸಂಗತಿ ಕಿವಿಗೆ ಬೀಳುವ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಪ್ರವಾಸದಲ್ಲಿ ಕೆಲಸ ಸುಖಾವಹ. ಆದರೆ ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೧, ೨೫, ೨೬, ೨೭ ಅನುಕೂಲ.

## ವೃಶ್ಚಿಕ

ಸ್ತ್ರೀ ಸುಖ ಅನುಕೂಲ. ಆದರೆ ಸ್ವತಃದ ಮತ್ತು ಮಕ್ಕಳ ಪ್ರಕೃತಿ ಬಹಳ ಕೆಡುವದು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ. ಆದರೆ ಲಾಭ ಕಡಿಮೆ. ಮತ್ತು ವೆಚ್ಚದ ಸಂಗತಿಗಳಿಂದ ಪೇಚು ಬರುವಿಕೆ. ಧನಕೀನ ತಗಾದೆ ಬಹಳ ಹೆಚ್ಚಿ ಮನಸಿನಲ್ಲಿ ಚೈನ ಇಲ್ಲದಿರುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಮಿತ್ರರು ನಿಮ್ಮನ್ನು ಮೇಲಕ್ಕೆತ್ತುವ ಬದಲು ಕೆಳಗೆ ನೂಕುವ ಪ್ರಯತ್ನ ಮಾಡುವರು. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೨೧, ೨೨, ೨೩ ಅನುಕೂಲ.

## ಧನು

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿ ಬಹಳ ಚಿಂತೆ ಹುಟ್ಟಿಸುವಂಥ ಪ್ರಶ್ನೆಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅಂದಾಜಿಗಿಂತ ಹೆಚ್ಚು ಉತ್ತಮ. ಆದರಂತೆ ವೆಚ್ಚವೂ ಅಭಾವಿತ ಕೆಲಸಗಳಲ್ಲಿ ದೊಡ್ಡ ಪ್ರಮಾಣ ಮೀರಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಕಟು ನೀತಿಯಲ್ಲಿ ಕೆಲ ಅನುಕೂಲತೆಗಳು. ಮಿತ್ರತ್ವದಲ್ಲಿ ವಿರೋಧ. ಪ್ರವಾಸಾದಿ ಕೆಲಸ ಬಹಳ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೨೧, ೨೨, ೨೩, ೨೪ ಅನುಕೂಲ.

## ಮಕರ

ಪ್ರಕೃತಿ ನಿಮ್ಮದು ಅನುಕೂಲ. ಆದರೆ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ಕೆಡುವ ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವು ಉತ್ತಮ. ಆದರೆ ಆ ವಿಷಯದಿಂದ ಪ್ರಾಪಂಚಿಕ ಸುಖ ಅತ್ಯಂತ ಕಡಿಮೆ. ಯಾರೊಬ್ಬರು ನಿಮ್ಮ ಮೇಲೆ ಹೆಚ್ಚು ಸಿಟ್ಟಾಗುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನನುಕೂಲತೆ. ಪ್ರವಾಸಾದಿ ಕೆಲಸ ಹಿತದಲ್ಲ. ಶ್ರವಣದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೫, ೨೬ ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣ ಕುರುಕುರಿಯದು. ಆದರೆ ಹೆಂಡತಿ ಪ್ರಾಪಂಚಿಕ ಸುಖ ಬಹಳ ಉತ್ತಮ. ಕೆಲ ದಿನಗಳವರೆಗೆ ಪ್ರಿಯ ಜನರ ಸಹವಾಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮತ್ತು ಪ್ರತಿಯೊಂದು ಕೆಲಸದಲ್ಲಿ ಅಲ್ಪಾಯಾಸದಿಂದ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೇ ವಿಜಯ. ಆದರೆ ಶತ್ರುವೂ ಮತ್ತೆ ಜೋರು ಮಾಡತಕ್ಕವನು. ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸ ಹಿತದ್ದು. ಧನಿಷ್ಠಾದ ಕೊನೆಯ ೩ ಮತ್ತು ಶತತಾರಿಕೆಯ ಮೊದಲನೆ ಚರಣಕ್ಕೆ ಹೆಚ್ಚು ಅನುಕೂಲ ತಾ. ೨೧, ೨೫, ೨೭ ಅನುಕೂಲ.

## ಮೀನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ. ಬಂಧು ವರ್ಗದವರ ಗೂಡ ವಿರೋಧ. ಮಕ್ಕಳು ಮನಸಿಗೆ ಹತ್ತುವಂಥ ಕೆಲಸ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಕಡಿಮೆ. ಆದರೆ ಲಾಭ ಅನುಕೂಲ. ಅವಚಿತ ಲಾಭದ ಸಂಭವ. ಪ್ರವಾಸ ತೊಂದರೆಯದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿನ್ನೆಡುವದು. ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯದು. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆ ಹೆಚ್ಚು ತಾ. ೨೨, ೨೩, ೨೭ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು



## ಶ್ರಾವಣ ಮಾಸದ ಕಥೆಗಳು

( ೧೫ ನೇ ಪುಟದಿಂದ ಮುಂದರಿದುದು )

ಹಿತ್ತಲಲ್ಲಿಯ ಒಂದು ಕೋಣೆಯನ್ನು ಸ್ವಚ್ಛ ಮಾಡಿ ಗೂಟ, ಕಣ್ಣಿ, ಹುಲ್ಲು ಇತ್ಯಾದಿಗಳ ಅಣಿ ಮಾಡಹತ್ತುವಳು. ತಾಯಿಯನ್ನು ಮುಪ್ಪಿನ ಕಾಲದಲ್ಲಿ ಪಾಲಿಸಿ ಪುತ್ರ-ಧರ್ಮವನ್ನು ನೆರವೇರಿಸಿ ಕೃತಕೃತ್ಯಳಾಗಬೇಕೆಂಬ ಹಬ್ಬಯಕೆ. ಗಂಡನು ಆಕಳನ್ನು ಬಿಡಿಸಿ ತರಲು ಹೋದ. ಆದರೆ ಕಸಾಯಿಖಾನೆಯಲ್ಲಿ ಆದರ ಮಾಂಸದ ಮುದೆ ತೂಗು ಬಿದ್ದುದನ್ನು ನೋಡುವನು. ತಲೆಯು ತಿರುಗಹತ್ತಿತು. ಕತೆಯು ಇಷ್ಟೇ.

ಕತೆಗೆ ಮುಖ್ಯ ಪಾತ್ರ ಒಂದು ಅಜ್ಞಾನ, ಮೂಕ ಪ್ರಾಣಿಯಾದ ಮುದಿ ಆಕಳು ಮಾನವನ ಸೇವೆಗೆ ತನ್ನನ್ನು ಮೀಸಲುಗೊಂಡಿದೆ. ಸರ್ವಾರ್ಪಣೆಯೆಂದರೂ ಸರಿ. ಮೊಲೆಯಲ್ಲಿ ಹಾಲೂರಿದವರೆಗೆ ಹಾಲು ಕೊಟ್ಟಿದೆ. ಮಾನವನು ಕುಡಿದು, ಬೆಳೆದು ದೊಡ್ಡವನಾದ. ಮುಪ್ಪಿನ ಕಾಲದಲ್ಲಿ ಪ್ರತಿಫಲವೆಂದು ಒಂದೆರಡು ಒಣ ಹುಲ್ಲಿನ ಸಿವುಡು ಹಾಕಿ ಕಾಪಾಡದೆ ಬೆಳೆಗೇಡಿನ ನೆವದಿಂದ ಕಟುಕರಿಗೆ ಮಾರಿದ. ಆದರೂ ಬಾಯಿ ಬಿಟ್ಟು ಹೇಳದು. ನಾಲ್ಕು ಬೆಳ್ಳಿಯ ನಾಣ್ಯಕ್ಕೆ ಕೊಂಡ ಕಟುಕರು ಅದನ್ನು ಕಡಿದು ಮಾಂಸವನ್ನು ಎರಡು ದಿಲ್ಲಿಯ ಲಾಭಕ್ಕೆ ಒಡ್ಡಿದ. ಆಗೂ ಬಾಯಿ ತೆರೆಯದು. ಸೃಷ್ಟಿಯ ಸರ್ವಾಧಿಕಾರಿಯಾದ ಮಾನವರ ಯಾವ ಆಶೆಗೂ ತನ್ನ ಪ್ರತೀಕಾರ ಶಕ್ತಿಯನ್ನುಪಯೋಗಿಸದು. ಮೂಕ, ದುರ್ಬಲ, ಅಸಹಾಯ, ಅಸಮರ್ಥ. ಲೋಭಿ ಮಾನವನು ಆದರ ಮಾಂಸವನ್ನು ಚರ್ವಿಸುವ ಮುಂದೆ ತನ್ನ ಉಪಕಾರದ ಯಾವ ಹೊಣೆಯನ್ನು ಅರಿಯಬಲ್ಲ! ಮಾಂಸದ ರುಚಿಯಿಂದ ಒಗರು ಸಿಹಿ ಎಂದೇ ಅಭಿಪ್ರಾಯವನ್ನು ಕೊಡಬಲ್ಲ. ಹಿಂದುಗಳು ದೇವರೆಂದು ತಿಳಿಯುವ ಆಕಳನ್ನು ಅದು ಹೋಗಲಿ. ಉಪಕಾರ ಮಾಡಿದವರನ್ನು ಹೀಗೆ ನಾಲ್ಕು ಕಾಸಿನ ಆಶೆಗೆ ಕಟುಕರಿಗೆ ಮಾರುವದು ಮಾನವನ ಕಸಾಯಿತನವನ್ನು ಎಷ್ಟು ಬಗೆಯಿಂದ ಹಳೆಯಬೇಕು. ಕತೆಯಲ್ಲಿ ಸುಕನ್ಯಾ ಸಹ ಕಸಾಯಿಯೇ! ನಂದಕನೂ ಕಸಾಯಿಯೇ! ಅಲ್ಲದೆ ಕೃತಜ್ಞತೆಯ ಅರ್ಥವನ್ನು ಹೀಗೆ ಕೃತಘ್ನರಾಗಿ ನೆರವೇರಿಸಿದರೆ ಮುದ್ರಕರೂ ಲೇಖಕರೂ ವಾಚಕರೂ ಸಹ ಕಸಾಯಿಗಳೇ! ಮೂವರು ಕಸಾಯಿಗಳ ಅರ್ಥವನ್ನು ಹೀಗೆ ವ್ಯಾಪ್ತಿಯಾಗಿ ತೆಗೆದುಕೊಂಡರೆ ತಪ್ಪೇನು?

Chekhovನು ತನ್ನ ಕತೆಗಳ ಸಂಬಂಧ ಹೇಳಿದ— The begginning of my stories always very promising, the middle is huddled and timid and the end is like firework ದಂತೆ ಕತೆಯು ಆರಂಭದಲ್ಲಿ ಸೆಳೆದ ಕೋಲ್ಮಿಂಚಿನ ಬೆಳಕು ಮುಕ್ತಾಯದಲ್ಲಿ ಅಚ್ಚಳಿಯದೆ ಹಾಗೆಯೆ ಉಳಿದಿದೆ. ಸಣ್ಣ ಕತೆಗೆ ಬೇಕಾಗುವ ತಂತ್ರಗಳೆಲ್ಲ ಏಕಮುಖದಿಂದ ಪೂರ್ತಿಗೊಂಡಿವೆ. ಶ್ರಾವಣ ಮಾಸದ ಉತ್ತಮ ಕತೆಯು. ಇದಕ್ಕೇ ಪಟ ಗಟ್ಟಬೇಕು.